ಅಭಿನವ ವಾಚನಮಾಲೆಯ

ಕನ್ನಡ ಆರನೆಯ ಪುಸ್ತಕದ

# ಅರ್ಥ ಬೋಧಿನಿ



ಬರೆದವರು.

ತಿಗಳೂರ/ರಂಗನಾಥ ಎಂ. ಎ. ಬಿ. ಟಿ.

ಧಾರವಾಡ

ದೊರೆಯುವ ಸ್ಥಳ:

ಮಹಾಂತೇಶ ಬುಕ್ ಡಿಪೋ, ಬಾಗಲಕೋಟೆ

ಪ್ರಕಾಶಕರು :

ಎಸ್. ರಂಗನಾಥ

ಶ್ರೀಸಾಯಿ ಪಬ್ಲಿಶಿಂಗ ಹೌಸ ವಿಜಯ ರೋಡ ಧಾರವಾಡ

೧೯೫೫

ಬೆಲೆ ೧—೨—೦

# ಅಭಿನವ ವಾಚನಮಾಲೆಯ ಆರನೆಯ ಪುಸ್ತಕದ

# ಅರ್ಥ ಬೋಧಿನಿ



## ತಿಳಿಹೇಳುವ ಮಾತು

**ಅರ್ಥ ಬೋಧಿನಿಯು** ಪಠ್ಯ ಪುಸ್ತಕದಲ್ಲಿಯ ಪಾಠಗಳ ಅರ್ಥವನ್ನು ತಿಳಿಸುವುದು. ಪಾಠವನ್ನು ತಿಳಿಯಬೇಕಾದರೆ, ಪಾಠವು ಯಾವ ವಿಷಯದ ಬಗ್ಗೆ ಇದೆ ? ಪಾಠದ ಮುಖ್ಯ ಸಾರಾಂಶವೇನು ? ಪಾಠದಲ್ಲಿ ಬರುವ ಕಠಿಣ ಶಬ್ದಗಳ ಅರ್ಥ, ಒಳಗಿನ ಅರ್ಥ; ಪಾಠದಲ್ಲಿ ಬರುವ ಕಠಿಣ ವಾಕ್ಯಗಳ ವಿವರಣೆಯ ಅರ್ಥ; ಪ್ರಶ್ನೆಗಳಿಗೆ ಉತ್ತರ; ಪ್ರಬಂಧ ಲೇಖನಕ್ಕೆ ಸಹಾಯ; ನೆನಪಿಗಾಗಿ ಪಾಠದಲ್ಲಿ ಬಂದಿರುವ ಉತ್ತಮ ವಾಕ್ಯಗಳನ್ನು ಎತ್ತಿಕೊಡುವುದು; ಹೀಗೆ ಕ್ರಮವಾಗಿ ಹೇಳಲಾಗಿದೆ. ಒಂದೊಂದು ಹೆಜ್ಜೆಯೂ ತಿಳಿವಳಿಕೆ ಹುಟ್ಟಿಸುವುದು. ಈ ಏಳೂ ಹೆಜ್ಜೆಗಳನ್ನು ದಾಟುವಾಗ ಪಾಠವು ಪಠ್ಯ ಪುಸ್ತಕದಲ್ಲಿ ಉಳಿಯದೆ ಜ್ಞಾನವಾಗಿ ನಿಮ್ಮ ವಶಕ್ಕೆ ಬಂದಿರುವುದು.

ಅರ್ಥ ಬೋಧಿನಿಯಲ್ಲಿ ಉಪಯೋಗಿಸುವ ಭಾಷೆಯು ಸರಳವಾಗಿರುವುದು. ಸಣ್ಣ ಸಣ್ಣ ವಾಕ್ಯಗಳು, ತಿಳಿಯುವಂತಹ ಶಬ್ದಗಳು ಪ್ರಯೋಗಮಾಡಲ್ಪಟ್ಟಿವೆ. ಉಪಯೋಗಮಾಡಲ್ಪಟ್ಟಿವೆ. ಮೊದಲು ನಿಮ್ಮ ಪಠ್ಯದಲ್ಲಿಯ ಪಾಠವನ್ನು ಓದಿರಿ. ಅದು ಯಾವ ವಿಷಯದ ಬಗ್ಗೆ ಪಾಠ ಇರುವುದು ಎಂಬುದು ಮಸಕಾಗಿ ತಿಳಿವುದು. ಆಗ ಅರ್ಥ ಭೋಧನಿಯಲ್ಲಿಯ ಮೊದಲನೆಯ ಭಾಗ ನೋಡಿದರೆ ವಿಷಯವು ಸ್ಪಷ್ಟವಾಗುವುದು. ನಂತರ ಸಾರಾಂಶ ಓದಿದರೆ ಮನದಟ್ಟಾಗಿ ಮನಸ್ಸಿನಲ್ಲೇ ಉಳಿಯುವುದು. ನಂತರ ಕಠಿಣ ಶಬ್ದಗಳ ಅರ್ಥವನ್ನು ತಿಳಿದುಕೊಂಡು, ಕಠಿಣ ವಾಕ್ಯಗಳ ವಿವರಣೆ ಓದಿಕೊಂಡು ಮತ್ತೆ ನಿಮ್ಮ ಪಠ್ಯದಲ್ಲಿಯ ಪಾಠ ಓದಿದರೆ ಇಡಿ ಪಾಠವು ತಿಳಿದುದು ಮನವರಿಕೆಯಾಗುವುದು. ಆಗ ಯಾವುದೇ ಪ್ರಶ್ನೆಗೆ ಉತ್ತರ ಕೊಡಲು ನಿಮಗೆ ಬರುವುದು. ಪ್ರಶ್ನೆಗಳಿಗೆ ನೀವೇ ಉತ್ತರ ಬರೆಯಿರಿ. ನೀವು ಬರೆದ ಉತ್ತರಗಳು ಸರಿಯಾಗಿರುವವೋ ಇಲ್ಲವೊ ಎಂಬುದನ್ನು ಇಲ್ಲಿ ಕೊಟ್ಟಿರುವ ಪ್ರಶ್ನೆ–ಉತ್ತರ ಭಾಗದಲ್ಲಿ ನೋಡಿರಿ.

ಪ್ರಬಂಧದ ಕಡೆಗೆ ಲಕ್ಷ್ಯ ಹಾಕಿರಿ. ಬರೆಯಲು ಬಂದಿತೆಂದರೆ ಪಾಠ ವಿಷಯ ತಿಳಿದಿರುವುದಲ್ಲದೆ ಹೊಸವಿಷಯಗಳೂ ನಿಮ್ಮ ಜ್ಞಾನಭಾಂಡಾರಕ್ಕೆ ಬರು ಬರೆಯುವ ಚಟ ಬೆಳೆಯಿಸಿಕೊಳ್ಳಿರಿ. ಬರೆಯುವದಕ್ಕೆ ನೆರವಾಗುವ ಹಾಗೆ ಭಾಗದಲ್ಲಿ ಸೂಚನೆ ಮಾಡಿರುವದು. ಒಮ್ಮೊಮ್ಮೆ ಮಾದರಿಯಾಗಿ ಬರೆದೂ ತೋರಿಸಲಾಗಿರುವುದು.

ವ್ಯಾಕರಣ ಭಾಗವನ್ನು ನಿಮ್ಮ ಪಠ್ಯಪುಸ್ತಕದಲ್ಲಿ ವಿವರವಾಗಿ ಹೇಳಿದೆ. ಅವುಗಳ ಸಹಾಯ ಪಡೆದು ವ್ಯಾಕರಣ ತಿಳಿಯಿರಿ. ಆ ಬಗ್ಗೆ ಏನಾದರೂ ಹೇಳುವುದು ಅಗತ್ಯ ವಿದ್ದಾಗ ಅರ್ಥಭೋಧಿನಿಯು ತಿಳಿಸುವುದು.

ನೆನಪಿಗಾಗಿ, ಎಂದು ಹೇಳಿದ ಮಾತುಗಳನ್ನು ಬಾಯಿಪಾಠಮಾಡಿರಿ. ಬಾಯಿಪಾಠ ಮಾಡಿದರೆ ಪ್ರಬಂಧ ಬರೆಯಲು ಸಹಾಯವಾಗುವುದು.

ಇದು ಸ್ವಂತವಾಗಿ ಅಭ್ಯಾಸಮಾಡುವ ಕ್ರಮ. ಹೀಗೆ ನೀವು ಅಭ್ಯಾಸಮಾಡಿಕೊಂಡು ಶಾಲೆಗೆ ಹೋದರೆ ಗುರುಗಳು ಹೇಳಿದ್ದು ಬೇಗನೆ ತಿಳಿಯುವುದು. ತಿಳಿವಳಿಕೆ ಆದಾಗ ಆಗುವ ಆನಂದ ಬೇರಾವುದರಿಂದಲೂ ಆಗುವುದಿಲ್ಲ. ಆ ಆನಂದವು ಹೆಚ್ಚಿನ ತಿಳಿವಳಿಕೆಗೆ ದಾರಿ ಮಾಡಿಕೊಡುವುದು. ಅದು ಆದರೆ ಅರ್ಥಬೋಧಿನಿಯು ತನ್ನ ಕೆಲಸಮಾಡಿದ ಹಾಗೆ ಆಯಿತು.



# ಗದ್ಯವಿಭಾಗ

## ೧ ಸ್ವಾಮಿ ವಿವೇಕಾನಂದರ ದಿಗ್ವಿಜಯ

**ಈ ಪಾಠದ ವಿಷಯ ಯಾವುದು ?**

ಸ್ವಾಮಿವಿವೇಕಾನಂದರು ಸರ್ವಧರ್ಮ ಪರಿಷತ್ತಿಗೆ ಹೇಗೆ ಹೋದರು ? ಅಲ್ಲಿ ಅವರು ಮಾಡಿದ ಕಾರ್ಯವಪೇನು ? ಸರ್ವಧರ್ಮಗಳ ಪರವಾಗಿ ಏನು ಮಾತಾಡಿದರು ? ಭಾರತದ ಗೌರವ ಹೇಗೆ ಹೆಚ್ಚಿಸಿದರು, ಮುಂತಾಗಿ ಹೇಳಿದೆ.

**ಈ ಪಾಠದ ಸಾರಾಂಶ**

ಅಮೇರಿಕೆಯಲ್ಲಿ ಎಂದೋ ಸರ್ವಧರ್ಮಸಮ್ಮೇಲನ ಸೇರುವುದೆಂದು ಸ್ವಾಮಿ ವಿವೇಕಾನಂದರು ಸಮಾಚಾರ ಕೇಳಿದ್ದರು. ಜಹಗೀರದಾರರೊಬ್ಬರು ಹಡಗದ ಟಿಕಟ್ ಕೊಡಿಸಿದ್ದರು. ೧೮೯೩ರ ಮೇ ೩೧ ಕ್ಕೆ ಸ್ವಾಮೀಜಿ ಪ್ರಯಾಣ ಹೊರಟರು. ಸಿಂಹಲ, ಸಿಂಗಾಪುರ, ಹಾಂಗ್‌ಕಾಂಗ ಮಾರ್ಗವಾಗಿ ಜಪಾನಕ್ಕೆ ಬಂದರು. ಹೋದಲ್ಲೆಲ್ಲ ಪ್ರಾಚೀನ ಹಿಂದು ಸಂಸ್ಕೃತಿಯನ್ನು ಕಂಡು ಇಂದಿನ ಭಾರತದ ಹೀನದೆಸೆಯನ್ನು ನೆನೆದು ತಲ್ಲಣಗೊಂಡರು. ಜುಲೈ ಮಧ್ಯದಲ್ಲಿ ಚಿಕ್ಯಾಗೋ ಮುಟ್ಟಿದರು. ಸಪ್ಟಂಬರದಲ್ಲಿ ಸಮ್ಮೇಲನ ಸೇರುವುದಿತ್ತು. ಪ್ರತಿನಿಧಿಗಳ ಹೆಸರು ಕೊಡುವ ಅವಧಿ ಮೀರಿತ್ತು. ಸಮ್ಮೇಲನ ಸೇರುವ ತನಕ ಜೀವಿಸಲಿಕ್ಕೆ ಹಣವಿಲ್ಲಿಲ್ಲ. ಮದ್ರಾಸಿನ ಒಂದು ಸಂಸ್ಥೆಗೆ ತಂತಿಕೊಟ್ಟು ಹಣವನ್ನು ಪ್ರಮಾಣ ಪತ್ರವನ್ನು ಕೇಳಿದರು. " ಸಮುದ್ರಯಾನ ಮಾಡಿ ಪರದೇಶಕ್ಕೆ ಹೋದ ಈ ಪಿಶಾಚಿ ಸಾಯಲಿ ಹೋಗಲಿ" ಎಂದು ಉತ್ತರಬಂತು. ಹಾರ್ವರ್ಡ ವಿಶ್ವವಿದ್ಯಾಲಯದ ಪ್ರೊ ರಾಯಟರು ವಿವೇಕಾನಂದರ ಪ್ರತಿಭೆಗೆ ಮನಸೋತರು. ಅವರು ಎಲ್ಲ ವ್ಯವಸ್ಥೆ ಮಾಡಿದರು. ಚಿಕ್ಯಾಗೋದಲ್ಲಿ ಸಮ್ಮೇಲನದ ಸ್ಥಳ ಹುಡುಕುವಾಗ ಅನೇಕ ತೊಂದರೆಗಳಾದುವು. ಅಂತೂ ಸಮ್ಮೇಲನಕ್ಕ ಬಂದರು. ಅಖಿಲಭಾರತದ ಪರವಾಗಿ ಇವರು ಬಂದಿದ್ದರು. ಇವರ ಸರತಿ ಕೊನೆಗೆ ಬಂದಿತು. " ಅಮೇರಿಕೆಯ ಅಣ್ಣತಮ್ಮಂದಿರಾ ಅಕ್ಕತಂಗೆಂದಿರಾ " ಎಂದು ಸಂಭೋದಿಸಿದ ಕೂಡಲೇ ಜನರು ಹರ್ಷೋದ್ರೇಕಗಳಿಂದ ಚಪ್ಪಾಳಿ ತಟ್ಟಿದರು. " ನಮ್ಮದು ಅತ್ಯಂತ ಪುರಾತನ ರಾಷ್ಟ್ರವು. ಹಿಂದೂಧರ್ಮವು ಸಕಲ ಧರ್ಮಗಳ ಮಹಾತಾಯಿ. ಪರಸ್ಪರರನ್ನು ಅರಿಯಿರಿ. ಎಲ್ಲರೂ ಸಾಗಿದ ಬೇರೆ ಬೇರೆ ದಾರಿಗಳು ಕೊನೆಗೆ ಪರಮಾತ್ಮನಲ್ಲಿ ಸೇರುತ್ತವೆ " ಎಂಬ ಹಿಂದೂ ಧರ್ಮದ ಸಂದೇಶವನ್ನು ಜಗತ್ತಿಗೆ ಸಾರಿದರು. ಭಾರತದ ಧರ್ಮಧ್ವಜವನ್ನು ಮೆರೆಸಿದರು.

**ಕಠಿಣ ಶಬ್ದಗಳ ಅರ್ಥ**

ಪರ್ಯಟನ—ಪ್ರವಾಸ. ಧಾವಿಸು—ಓಡಿ ಹೋಗು. ಪ್ರಮಾಣಪತ್ರ—ಸರ್ಟಿಫೀಕೇಟು. ಅವಶೇಷ—ಹಾಳಾಗಿ ಉಳಿದ ಗುರುತುಗಳು. ಹೀನದೆಸೆ—ಕೆಟ್ಟ

ಸ್ಥಿತಿ. ದಿಙ್ಮೂಢ—ದಿಕ್ಕುಗಾಣದಂತೆಯಾಗು. ವರ್ಚಸ್ಸು—ಪ್ರಭಾವ. ಶುಷ್ಕ—ಒಣಗಿದ.

**ಕಠಿಣ ವಾಕ್ಯಗಳ ಅರ್ಥ**

೧. ಸಮುದ್ರಯಾನ ಮಾಡಿ ಪರದೇಶಕ್ಕೆ ಹೋದ ಈ ಪಿಶಾಚಿ ಸೆಟೆದು ಹೋಗಲಿ.

ಭಾರತದ ಧಾರ್ಮಿಕ ಆಚರಣೆಯು ಮಡಿವಂತಿಕೆಯದು. ಯಾರನ್ನು ಮುಟ್ಟುವ ಹಾಗಿಲ್ಲ. ತಿಂಗಳು ಗಟ್ಟಲೆ ಹಡಗು ಪ್ರವಾಸ ಮಾಡುವನೆಂದ ಮೇಲೆ ಅಲ್ಲಿ ಧಾರ್ಮಿಕ ಆಚರಣೆಗೆ ಅಡ್ಡಿಯಾಗುವುದು. ಇದ್ದ ಸ್ಥಿತಿಯಲ್ಲಿ ಧಾರ್ಮಿಕ ಕಾರ್ಯಗಳನ್ನು ಮಾಡಿದರೆ ಪಾಪ; ಬಿಟ್ಟರೆ ಘೋರ ಪಾಪ ಹೀಗಾಗಿ ಸಮುದ್ರಯಾನವು ನಿಷೇಧವೆಂದು ಸಾರಲಾಗಿತ್ತು. ವಿವೇಕಾನಂದರು ಸಮುದ್ರಯಾನ ಮಾಡಿ ಪರದೇಶಕ್ಕೆ ಹೋಗಿರುವರೆಂದರೆ ಸನಾತನ ಧರ್ಮದ ತತ್ವದ ವಿರುದ್ಧ ಆಚರಿಸಿರುವರು. ಹೀಗೆ ಧರ್ಮ ಕಳೆದು ಕೊಂಡವನು ಪಿಶಾಚಿಯೇ ಸರಿ ಅವನು ಸತ್ತರೆ ಸನಾತನ ಧರ್ಮಕ್ಕೆ ಒಳ್ಳೆಯದು, ಎಂದು ಹಳೆಯ ಸಂಪ್ರದಾಯದಲ್ಲಿ ಬೆಳೆದವರ ಅಭಿಪ್ರಾಯ. ಅದಕ್ಕೆ ಆ ಸಂಸ್ಥೆಯು ಹಾಗೆ ವಿವೇಕಾನಂದರ ತಂತಿಗೆ ಉತ್ತರ ಕೊಟ್ಟಿತು.

೨ ಪರಸ್ಪರರನ್ನು ಅರಿಯಿರಿ. ಅರಿತು ಅಪ್ಪಿಕೊಳ್ಳಿರಿ, ಎಲ್ಲರೂ ಸಾಗಿದ ಬೇರೆ ಬೇರೆ ದಾರಿಗಳು ಕೊನೆಗೆ ಪರಮಾತ್ಮನಲ್ಲಿ ಸೇರುತ್ತವೆ.

ಈ ಪ್ರಪಂಚದಲ್ಲಿ ಮಾನವನು ದೇವನನ್ನು ಅರಿಯಬೇಕೆಂಬ ಹಂಬಲವು ಇದ್ದಂತೆ ಮಾನವನು ಮಾನವನನ್ನು ಅರಿಯುವುದೂ ಹಂಬಲವಾಗಬೇಕು. ನಿತ್ಯವೂ ಸಮಾಜದಲ್ಲಿ ಮಾನವನು ಇತರ ಮಾನವನೊಡನೆ ಇರುವನು. ತನ್ನಷ್ಟಕ್ಕೆ ತಾನು ಇದ್ದಾಗ ದೇವನ ಚಿಂತನೆ ಮಾಡಬಹುದು. ದೇವನ ಚಿಂತನೆಗೆ ಮನಸ್ಸಿಗೆ ಶಾಂತತೆ ಬೇಕು. ಆ ಶಾಂತತೆಯು ಜೀವನದಲ್ಲಿ ಮೂಡಿಬರಬೇಕಾದರೆ ಸುತ್ತಲಿನ ಸಾಮಾಜಿಕ ಪರಿಸ್ಥಿತಿಯನ್ನು ತಿಳಿಯಬೇಕು. ಯಾರು ಯಾರು ಇದ್ದಾರೆ, ಅವರು ಹೇಗೆ ಇದ್ದಾರೆ. ಅವರ ಪರಿಸ್ಥಿತಿ ಗತಿಯೇನು ಇರುವುದು ತಿಳಿದು ಅವರನ್ನು ಅಂತ:ಕರಣದಿಂದ ನೋಡಿದರೆ ಮನಸ್ಸಿಗೆ ಶಾಂತತೆ ಬರುವುದು. ಮತ್ತು ಆಗ ಉಳಿದವರು ಯಾವ ದಾರಿಯನ್ನೇ ಅನುಸರಿಸಲಿ ಅದೂ ಭಗವಂತನ ಕಡೆಗೆ ಹೋಗಿ ಮುಟ್ಟಿಸುತ್ತಿದೆ ಎಂಬ ತಾಳ್ಮೆಯುಂಟಾಗುವುದು. ಇದೇ ಹಿಂದೂ ಧರ್ಮವು ಹೇಳುವ ತಿರುಳಿನಮಾತು.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಸ್ವಾಮಿ ವಿವೇಕಾನಂದರು ಯಾವ ಕಾರ್ಯಕ್ಕಾಗಿ ಅಮೇರಿಕೆಗೆ ಹೊರಟರು ?

**ಉತ್ತರ :** ಅಮೇರಿಕೆಯಲ್ಲಿ ಸರ್ವ ಧರ್ಮ ಸಮ್ಮೇಲನವು ಆಗುತ್ತಿತ್ತು. ಅದರಲ್ಲಿ ಭಾರತದ ಪ್ರತಿನಿಧಿಯಾಗಿ ಹೋಗಬೇಕೆಂದು ಹಿಂದು ಧರ್ಮದ ಹಿರಿತನವನ್ನು ವಿಶಾಲತೆಯನ್ನು ತಿಳಿಯಪಡಿಸುವುದಕ್ಕಾಗಿ ಅವರು ಅಮೇರಿಕೆಗೆ ಹೊರಟರು.

**ಪ್ರಶ್ನೆ : ೨** ಜಪಾನದ ದರ್ಶನದಿಂದ ವಿವೇಕಾನಂದರಲ್ಲಿ ಎಂತಹ ಭಾವನೆಗಳು ಹುಟ್ಟಿದುವು.

**ಉತ್ತರ :** ಆಗ ಜಪಾನವು ವೈಭವ ಶಿಖರದಲ್ಲಿತ್ತು. ಸ್ವಾತಂತ್ರ್ಯವನ್ನು ಅನುಭವಿಸುತ್ತಿತ್ತು. ಆದರೆ ಹಿಂದೀಯರು ಪಾರತಂತ್ರ್ಯದಲ್ಲಿ ಕೊಳೆಯುತ್ತಿರುವುದನ್ನು ನೋಡಿ ವಿವೇಕಾನಂದರಿಗೆ ಬಹು ವ್ಯಥೆಯಾಯಿತು.

**ಪ್ರಶ್ನೆ : ೩** ಸನಾತನ ಧರ್ಮ ಸಂಸ್ಥೆಯವರು ವಿವೇಕಾನಂದರಿಗೆ ಪ್ರಮಾಣ ಪತ್ರವನ್ನೇಕೆ ಕೊಡಲಿಲ್ಲ ?

**ಉತ್ತರ :** ಕಠಿಣ ವಾಕ್ಯಗಳ ಅರ್ಥ ನೋಡಿರಿ.

**ಪ್ರಶ್ನೆ : ೪** ಚಿಕ್ಯಾಗೋದಲ್ಲಿ ವಿವೇಕಾನಂದರು ಸಹಿಸಿದ ಕಷ್ಟಗಳಾವುವು ?

**ಉತ್ತರ :** ಮೊದಲ ಸಲ ಚಿಕಾಗೋದಲ್ಲಿ ಜುಲೈದಲ್ಲಿ ಬಂದಿಳಿದಾಗ ಸಮ್ಮೇಲನವು ಸಪ್ಟಂಬರದಲ್ಲಿ ಎಂದು ತಿಳಿದ ಕೂಡಲೆ ಹತ್ತಿರದಲ್ಲಿಯ ಹಣ ಕಡಿಮೆಯೆಂದು ಕಂಡು ಬಂದು ದಿಙ್ಮೂಢರಾದರು. ಹಾರ್ವರ್ಡದ ಪ್ರೊಫೆಸರ ಸಹಾಯದಿಂದ ಎರಡನೆಯ ಸಲ ಚಿಕಾಗೋಕ್ಕೆ ಬಂದಾಗ ಗಾಡಿ ತಡವಾಗಿ ಬಂದಿತು. ಯಾರ ಗುರುತು ಇಲ್ಲ. ಚಳಿಯಲ್ಲಿಯೆ ನಿಲ್ದಾಣದಲ್ಲಿ ಕಳೆದರು. ಸಮ್ಮೇಲನದ ಸ್ಥಳ ಹುಡುಕುವುದಕ್ಕೆ ಅಲ್ಲಲ್ಲಿ ಕೇಳಿದಾಗ ಕೆಲವರು ಹೊರ ದೂಡಿದರು. ಕೆಲವರು ಅಪಮಾನ ಮಾಡಿದರು. ಘಂಟೆ ಘಂಟೆ ತಿರು ತಿರುಗಿ ಬೇಸತ್ತು ಬೀದಿಯಲ್ಲಿ ಕುಕ್ಕರಿಸಿದರು.

**ಪ್ರಶ್ನೆ : ೫** ಸರ್ವ ಧರ್ಮ ಸಮ್ಮೇಲನದಲ್ಲಿ ವಿವೇಕಾನಂದರಿಗೆ ಅಪೂರ್ವವಾದ ಮನ್ನಣೆ ಏಕೆ ದೊರೆಯಿತು ?

**ಉತ್ತರ :** ವಿವೇಕಾನಂದರು ಯಾವುದೊಂದು ಸಂಸ್ಥೆಯ ಪ್ರತಿ ನಿಧಿಯಾಗಿ ಮಾತನಾಡದೆ ಇಡಿ ಭಾರತದ ಪ್ರತಿ ನಿಧಿಯಾಗಿ ಮಾತನಾಡಿದರು. ಸಭಿಕರ ಮನ ಮುಟ್ಟುವಂತೆ ಮಾತನಾಡಿದರು. ಹಿಂದೂ ಧರ್ಮವು ಸಕಲ ಧರ್ಮದ ತಾಯಿ ಎಂದು ಹೇಳಿದರು. ತೆರೆದ ಹೃದಯದಿಂದ ಸಭಿಕರ ಹೃದಯಕ್ಕೆ ತಾಗುವಂತೆ ಮಾತನಾಡಿದ್ದರಿಂದ ಅವರಿಗೆ ಅಪೂರ್ವವಾದ ಮನ್ನಣೆ ದೊರೆಯಿತು.

**ಪ್ರಶ್ನೆ : ೬** ವಿವೇಕಾನಂದರು ವಿವರಿಸಿದ ಹಿಂದೂ ಧರ್ಮದ ಸಂದೇಶವಾವುದು ?

**ಉತ್ತರ :** ಪರಸ್ಪರನ್ನು ಅರಿಯಿರಿ. ಅರಿತು ಅಪ್ಪಿಕೊಳ್ಳಿರಿ. ಎಲ್ಲರೂ ಸಾಗಿದ ದಾರಿಗಳು ಬೇರೆ ಬೇರೆಯಾಗಿದ್ದರೂ ಅವು ಕೊನೆಗೆ ಪರಮಾತ್ಮನಲ್ಲಿ ಸೇರುತ್ತವೆಯೆಂದು ಹಿಂದೂ ಧರ್ಮದ ದಿವ್ಯ ಸಂದೇಶವನ್ನು ಸಾರಿದರು.

**ಅಭ್ಯಾಸ :** ೧ ನಿಸ್ವಾರ್ಥ ಗುಣ; ಇತರರಿಗೆ ಯೋಗ್ಯ ಮನ್ನಣೆ ಕೊಡುವ ಗುಣ ಇವು ಇದ್ದರೆ ಜನರ ಮನಸ್ಸನ್ನು ನಾವು ಸಹಜವಾಗಿ ಆಕರ್ಷಿಸಬಲ್ಲೆವು.

**ವ್ಯಾಕರಣ :** (೨) ಸಂಭವಾರ್ಥ ೧ ಮತ್ತು ೪; ನಿಷೇಧಾರ್ಥ ೩ ಮತ್ತು ೭; ವಿಧ್ಯರ್ಥ ೨ ಮತ್ತು ೬; ಸಂಶಯಾರ್ಥ ೫ ಮತ್ತು ೮.

(೩) ೧ ವಿವೇಕಾನಂದರು ೧೮೯೩ ರಲ್ಲಿ ದಿಗ್ವಿಜಯವನ್ನು **ಕೈಕೊಂಡರು**. (೨) ಅವರಂಥ ಸಾಹಸವನು ಹೇಡಿಗಳಾದವರು **ಕೈಕೊಳ್ಳರು.** (೩) ನಾವೆಲ್ಲರೂ ಅವರಂಥ ಸಾಹಸವನ್ನು **ಕೈಕೊಳ್ಳೋಣ.** (೪) ವಿವೇಕಾನಂದರ ಕಾರ್ಯವನ್ನು ಮುಂದೆ ನಮ್ಮಲ್ಲಿ ಯಾರೊಬ್ಬರು **ಕೈಕೊಂಡಾರು.**

**ನೆನಪಿಗಾಗಿ :** ತಮ್ಮ ಕಾಲಮೇಲೆ ನಿಂತು ಹೋರಾಡುವವರ ಬೆನ್ನು ದೈವ ಕಟ್ಟೆಯೇ ಕಟ್ಟುವುದು.

~~~~~~

## ೨ ಹಂಪೆಯ ದರ್ಶನ

**ಈ ಪಾಠದ ವಿಷಯವು ಯಾವುದು ?**

ಹಂಪೆಯನ್ನು ನೋಡಿದುದರ ಬಣ್ಣನೆ ಇಲ್ಲಿದೆ. ಅಲ್ಲಿ ಸುತ್ತಾಡಿದಾಗ ಉಂಟಾದ ಭಾವನೆಗಳು ಇಲ್ಲಿವೆ. ಮರೆತು ಹೋದ ಸಾಮ್ರಾಜ್ಯವು ಮರೆಯಲಾಗದ ಕೃತಿ ಮಾಡಿದೆ ? ಎಂಬುದನ್ನು ಇಲ್ಲಿ ಹೇಳಿದೆ.

**ಈ ಪಾಠದ ಸಾರಾಂಶ**

ನಾವು ಮೂವರು ಮಿತ್ರರು ಹಂಪೆಯ ದರ್ಶನಕ್ಕೆಂದು ಹೊರಟೆವು ಹೊಸ ಪೇಟೆಯಲ್ಲಿಯ ಗೆಳೆಯನೊಬ್ಬನನ್ನು ಮಾರ್ಗದರ್ಶನಕ್ಕಾಗಿ ಕರೆದುಕೊಂಡು ಸಾಯ ಕಲ್ಲು ಸ್ವಾರರಾಗಿ ಹೊರಟೆವು. ಹೊಸಪೇಟೆಯಿಂದ ಹಂಪೆ ಎಂಟು ಮೈಲು. ದಾರಿ ಯುದ್ದಕ್ಕೂ ಭಣಗುಡುವಂತೆ ಅಲ್ಲಲ್ಲಿ ಬಿದ್ದ ದೇವರಿಲ್ಲದ ಹಾಳುಗುಡಿಗಳು· ಕಮಲಾ ಪುರ ಬಂದಿತು. ಅಲ್ಲಿಂದ ಹಂಪೆ ಬಲು ಸಮೀಪ. ಒಂದೊಂದೇ ಹಾಳುದೇಗುಲ ಕಾಣತೊಡಗಿತು ಎಡಕ್ಕೆ ಹೇಮಕೂಟ, ಅದರ ನೆತ್ತಿಯ ಮೇಲೆ ನಿಂತುಕೊಂಡ ದೇವಾಲಯಗಳು. ಸಾಮ್ರಾಜ್ಯಕಾಲದ ನಾಟಕ ಮನಸ್ಸಿನಲ್ಲಿ ನಡೆಯತೊಡಗಿತು. ಅಂದಿನ ವಿಜಯನಗರ ಇಂದು ಹಾಳು ಹಂಪೆಯಾಗಿದೆ. ರಾಜಧಾನಿ ಕಾಡಿನಲ್ಲಿ ಹುದುಗಿಹೋಗಿದೆ. ವಿರೂಪಾಕ್ಷ ದೇವಾಲಯದ ಗೋಪುರ ನೋಡಿ ಅಗಾಧಪಟ್ಟೆವು. ಮುಂದೆ ತೇರುಬೀದಿ. ಒಂದೆಡೆಗೆ ಉಗ್ರನರಸಿಂಹ. ಇನ್ನೊಂದೆಡೆಗೆ ಸಾಸಿವೆಕಾಳಗಣಪ್ಪ ಕಡಲೆಯಕಾಳ ಗಣಪ್ಪ. ಶ್ರೀರಾಮನು ದಂಡಕಾರಣ್ಯಕ್ಕೆ ಬಂದಾಗ ಸುಗ್ರೀವನ ಸ್ನೇಹ ಇಲ್ಲಿಯೇ ಬೆಳಸಿದುದು. ಕೋದಂಡರಾಮನ ದೇವಸ್ಥಾನದ ಎದುರು ತುಂಗಭದ್ರೆಯು ಪ್ರದಕ್ಷಿಣೆ ಹಾಕಿದ್ದಾಳೆ. ಅದು ಚಕ್ರತೀರ್ಥ. ಮುಂದೆ ಸುಕಂನ್ಯಾಸಿ ದಿಬ್ಬ. ವಿದ್ಯಾರಣ್ಯರ ತಪೋಭೂಮಿ. ವಿಜಯ ವಿಠ್ಠಲನ ದೇವಾಲಯವು ಮುಖ್ಯವಾಗಿನೋಡಬೇಕು. ಅಲ್ಲಿಯ ಕೆತ್ತನೆಯ ಕೆಲಸ ಸುಂದರವಾಗಿದೆ. ಹರಿಗೋಲಿನಿಂದ ಹೊಳೆದಾಟಿದರೆ ಆಚೆಗೆ ಅನೆಗೊಂದಿ. ಅಲ್ಲಿ ಸಮೀಪದಲ್ಲಿಯೆ ಶಬರಿ ಆಶ್ರಮ. ಅದಾದ ಮೇಲೆ ಪಂಪಾ ಸರೋವರ; ಉತ್ತರಕ್ಕೆ ಆಂಜನೇಯ ಪರ್ವತ. ಅದನ್ನೆಲ್ಲ ನೋಡಿಕೊಂಡು
~~~~~~

ಈಚೆಯದಡಕ್ಕೆ ಮತ್ತೆ ಬಂದೆವು. ದೊಡ್ಡ ರಾಜಧಾನಿಯನ್ನು ಸೈಕಲ್ ಪ್ರದಕ್ಷಿಣೆ ಮಾಡಿದ ನಮ್ಮ ಸಾಹಸವು ಎಂದಿಗೂ ಮರೆಯದಂತಹದು.

**ಕಠಿಣ ಶಬ್ದಗಳ ಅರ್ಥ**

ರುಕ್ಷ—ಒಣಒಣ. ಕ್ಷುಧಾ—ಹಸಿವೆ. ಗತವೈಭವ—ಹಿಂದೆ ಇದ್ದ ವೈಭವ, ನೆಲ್ಲು—ಭತ್ತ. ಭಣಗುಡು—ಹಾಳು ಹಾಳು ಕಾಣು. ದೇಗುಲ—ದೇವಾಲಯ. ತಪೋಭೂಮಿ—ತಪಸ್ಸು ಮಾಡಿದ ಭೂಮಿ. ಸುವರ್ಣ ವೃಷ್ಟಿ—ಬಂಗಾರದ ಮಳೆ. ದಿಬ್ಬ—ಸಣ ಗುಡ್ಡ; ಎತ್ತರ ಸ್ಥಳ. ವಿಗ್ರಹ—ಮೂರ್ತಿ. ಅಪಹರಿಸು—ಕದ್ದುಕೊಂಡು ಹೋಗು.

**ಕಠಿಣ ವಾಕ್ಯಗಳ ಅರ್ಥ**

ಪುಸ್ತಕದಲ್ಲಿ ಓದಿದ ಮರೆತು ಹೋದ ಎಂದಿಗೂ ಮರೆಯಲಾರದ ಸಾಮ್ರಾಜ್ಯ ಹೇಗಿದ್ದರಬೇಕು ಎಂದೆನ್ನಿಸಹತ್ತಿತು

ಮರೆತು ಹೋದ ಸಾಮ್ರಾಜ್ಯ, ಎಂದು ಒಂದು ಪುಸ್ತಕವಿದೆ. ಎಂದೂ ಮರೆಯಲಾಗದ ಸಾಮ್ರಾಜ್ಯ, ಎಂಬುದೂ ಒಂದು ಪುಸ್ತಕವಿದೆ. ಈ ಇಬ್ಬರು ಲೇಖಕರು ತಮ್ಮ ದೃಷ್ಟಿಯಿಂದ ಬರೆದಿದ್ದಾರೆ. ಕನ್ನಡಿಗರು ತಮ್ಮ ಸಾಮ್ರಾಜ್ಯವನ್ನು ಮರೆತದ್ದೂ ನಿಜ. ಅದಕ್ಕೆ ಹೀನ ಸ್ಥಿತಿಗೆ ಬಂದರು. ಆದರೆ ಗತವೈಭವದ ಅರಿವು ಮೂಡಿದಾಗ ಅದು ಎಂದೂ ಮರೆಯಲಾಗದ ಸಾಮ್ರಾಜ್ಯವೆಂದು ಅನ್ನಿಸತೊಡಗಿತು. ಇಂದಿನ ಹಂಪೆಯನ್ನು ನೋಡಿದರೆ ವಿಜಯನಗರ ಸಾಮ್ರಾಜ್ಯವು ಹೇಗಿದ್ದರಬೇಕು ಎಂಬುದರ ಕಲ್ಪನೆ ಬರುತ್ತದೆ. ಹಾಳಾದಾಗಲೇ ಅದರ ಸ್ಥಿತಿ ಹೀಗಿರುವಾಗ ವೈಭವದಿಂದ ಮೆರೆವಾಗ ಹೇಗಿರಬೇಕು, ಎಂಬ ವಿಚಾರ ನೋಟಕರಲ್ಲಿ ಮೂಡುವುದು. ಈ ವಿಚಾರ ಈ ಎಚ್ಚರ ಮೂಡಿಬಂದರೆ ಕನ್ನಡಿಗರು ಎಂತಹ ಯೋಗ್ಯತಾವಂತರು ಎಂಬ ತಿಳಿವು ಮೂಡುವುದು.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಮಿತ್ರರು ಪ್ರವಾಸದ ಸಿದ್ಧತೆಗಳನ್ನು ಹೇಗೆ ಮಾಡಿದ್ದರು ?

**ಉತ್ತರ :** ಊಟ ಉಪಹಾರದ ಎಲ್ಲ ವ್ಯವಸ್ಥೆ ಮಾಡಿದ್ದರು. ಒಬ್ಬೊಬ್ಬರು ಒಂದೊಂದು ತರಹದ ತಿಂಡಿ ತಿನಿಸುಗಳನ್ನು ತಂದಿದ್ದರು. ಚಪಾತಿ ಪಲ್ಲೆ, ಉಂಡಿ ಅವಲಕ್ಕಿ, ಬುತ್ತಿಕಲಸನ್ನ ಉಪ್ಪಿನಕಾಯಿ ಎಲ್ಲವೂ ಇತ್ತು. ಪ್ರವಾಸದಲ್ಲಿ ಎಲ್ಲಿಯೇ ಆಯಾಸ ಹಸಿವೆ ಆದರೂ ಅನುಕೂಲವಾಗುವ ಹಾಗೆ ಸಿದ್ಧತೆ ಮಾಡಿದ್ದರು.

**ಪ್ರಶ್ನೆ : ೨** ಹಾಳು ದೇಗುಲಗಳ ನೋಟದಿಂದ ಲೇಖಕರಲ್ಲಿ ಉಂಟಾದ ಭಾವನೆಗಳಾವು ?

**ಉತ್ತರ :** ಹಾಳು ಗುಡಿಗಳನ್ನು ನೋಡಿದಾಗ ಅವು ಹಿಂದಿನ ವೈಭವದ ನೆನಪನ್ನು ತಂದು ಕೊಡುತ್ತಿದ್ದವು. ಈಗ ಭಣಗುಟ್ಟುತ್ತಿದ್ದರೂ ಆಗ ಅವು ಸಾಮ್ರಾಜ್ಯ

ದಲ್ಲಿಯ ದೇವಾಲಯಗಳು. ವಿಜಯನಗರದ ಸಾಮ್ರಾಜ್ಯದ ನಾಟಕವು ಮನಸ್ಸಿನ ಮೇಲೆ ನಡೆದಿತ್ತು. ವಿದ್ಯಾರಣ್ಯರು ಮಾಡಿದ ತಪಸ್ಸು, ಸುವರ್ಣವೃಷ್ಟಿ. ಬೀದಿಗಳಲ್ಲಿ ರತ್ನ ಮುತ್ತು ಮಾರುತ್ತಿರುವ ನೋಟ. ಇವೆಲ್ಲವು ಇಂದು ಕಳೆದು ಹೋದಂತೆ ಭಾವನೆಗಳು ಮೂಡುತ್ತಿದ್ದವು.

**ಪ್ರಶ್ನೆ:** ೩ ವಿಜಯನಗರದ ವೀರಚರಿತೆಯನ್ನು ಯಾವ ವಸ್ತುಗಳು ಸಾರಿ ಹೇಳುವುವು ?

ಉತ್ತರ: ವಿದ್ಯಾರಣ್ಯರ ತಪಶ್ಚರ್ಯದ, ಹುಕ್ಕ ಬುಕ್ಕರ ವೀರಶ್ರೀಯ, ಕೃಷ್ಣದೇವರಾಯನ ಕಲಾವೈಭವದ ಅಮರ ಕುರುಹಾಗಿ ನಿಂತಿವೆ ಹಂಪೆ. ಅಲ್ಲಿಯ ಹಾಳು ದೇಗುಲಗಳ ದಿಬ್ಬಗಳು. ಉತ್ತುಂಗ ಪರ್ವತಗಳು ಶಿಲಾಶಾಸನಗಳು ತಿಳಿಯಾಗಿ ಹರಿವ ತುಂಗಭದ್ರೆ ಎಲ್ಲಾ ನೂರೊಂದು ಮುಖದಿಂದ ವಿಜಯನಗರದ ವೀರ ಚರಿತೆಯನ್ನು ಸಾರಿಹೇಳುತ್ತವೆ.

**ಪ್ರಶ್ನೆ:** ೪ ವಿದ್ಯಾರಣ್ಯರು ತಪಸ್ಸುಮಾಡಿದ ಸ್ಥಳವಾವುದು ?

ಉತ್ತರ; ವಿದ್ಯಾರಣ್ಯರು ತಪಸ್ಸುಮಾಡಿದ ಸ್ಥಳವು ಸಂನ್ಯಾಸಿಯ ದಿಬ್ಬ. ಅದೊಂದು ಈಗ ಕಲ್ಲುಮಂಟಪ. ನಿರ್ಜೀವವಾದ ಕಲ್ಲುಮಂಟಪವಿದ್ದರೂ ವಿದ್ಯಾರಣ್ಯರ ಪುಣ್ಯ ಸಾನ್ನಿಧ್ಯದಿಂದ ಜೀವಂತವಾಗಿ ಕಂಡು ಬಂತು.

**ಪ್ರಶ್ನೆ:** ೫ ವಿಜಯವಿಠ್ಠಲನ ಗುಡಿಯಲ್ಲಿ ನೋಡತಕ್ಕ ಕಲಾಕೃತಿಗಳಾವು ?

ಉತ್ತರ: ಅಲ್ಲಿಯ ಮಹಾಮಂಟಪ, ಕಲ್ಯಾಣಮಂಟಪ, ಕಲ್ಲಿನರಥ ನೋಡತಕ್ಕಂಥವಾಗಿವೆ. ಇಲ್ಲಿ ಕೆತ್ತನೆಯ ಕೆಲಸ ಸುಂದರವಾಗಿದೆ. ಒಂದು ಕಂಬದಲ್ಲಿ ಹದಿನಾರು ಕಂಬಗಳನ್ನು ಕೆತ್ತಿದ್ದಾರೆ. ಬಾರಿಸಿದರೆ ಸುಸ್ವರ ಬರುತ್ತದೆ. ಇವು ಅಲ್ಲಿ ನೋಡಬೇಕಾದ ಕಲಾಕೃತಿಗಳು.

**ಅಭ್ಯಾಸ :** ೧. ಹಸಿವು ಎರಡುತರಹ. ಹೊಟ್ಟೆಯ ಹಸಿವು ಎಲ್ಲ ಪ್ರಾಣಿಗಳಿಗೂ ಆಗುವುದು. ಮನಸ್ಸಿನ ಹಸಿವು ಮಾನವನ ಲಕ್ಷಣ. ಮನಸ್ಸಿಗೆ ಆಗುವ ಬಯಕೆಯು. ಆ ಹಸಿವು ಬಯಕೆ ಪೂರೈಸಿದರೆ ಮನಸ್ಸಿನ ಹಸಿವು ಹಿಂಗುವುದು. ಇಲ್ಲಿ ಹೊಟ್ಟೆಯೂ ತುಂಬಿತ್ತು ಮನಸ್ಸೂ ತುಂಬಿತ್ತು. ಎರಡೂ ಹಸಿವು ಹಿಂಗಿದ್ದವು.

**ವ್ಯಾಕರಣ :** ೨ ಪ್ರಶ್ನಾರ್ಥಕವಾಗಿ ಬರೆಯಿರಿ..

೧. ಕಮಲಾಪುರವು ಸಮೀಪಿಸಿತೆ ? (೨) ಆ ಹಂಪೆಯ ದೃಶ್ಯವನ್ನು ನಾನೆಂದಿಗೂ ಮರೆಯುವೆನೆ ? (೩) ಗೆಳೆಯರೆ, ನಾವೆಲ್ಲರೂ ಹಂಪೆಗೆ ಹೋಗೋಣವೆ ? (೪) ನಮ್ಮ ಸತ್ ಸಂಕಲ್ಪಗಳು ಕೈಗೂಡಿಯಾವೆ ?

೨. ಉದ್ಗಾರ ವಾಕ್ಯಗಳು; (೧) ಆಬಬ! ಮಗದಮಾಸೂರ ಕೆರೆ ಎಷ್ಟು ವಿಸ್ತಾರವಾಗಿದೆ. ಅದು ಸಮುದ್ರವನ್ನು ನೆನಪಿಗೆ ತರುತ್ತದೆ. (೨) ಅಹಹ ಈ ಕನ್ನಡ ನುಡಿಯು ಎನಿತು ಇನಿದಾಗಿದೆ! ಅಬಬ! ಇದು ಎಂತಹ ಭಯಂಕರವಾದ ಸರ್ಪವು.

೪ ಭಲೆ! ನಿನ್ನ ಚಾತುರ್ಯ ಮೆಚ್ಚುವಂತಿದೆ.

## ೩ ಮನುವಿನ ಕತೆ

**ಈ ಪಾಠದ ವಿಷಯವು ಯಾವುದು ?**

ಈ ಜಗತ್ತು ಪ್ರಳಯದ ನಂತರ ಹುಟ್ಟಿ ಬಂದಿದೆಯೆಂದು ತಿಳಿವು ಇದೆ. ಪ್ರಳಯ ಕಾಲದಲ್ಲಿ ಎಲ್ಲವೂ ಕೊಚ್ಚಿಹೋಯಿತೆ? ಯಾರೊಬ್ಬರಾದರೂ ಉಳಿದರೇ? ಅವರನ್ನು ಉಳಿಸಿದವರು ಯಾರು ? ಮಾನವ ಎಂದು ಹೆಸರು ಹೇಗೆ ಬಂದಿತು ? ಇವೆಲ್ಲ ಇಲ್ಲಿ ಹೇಳಿದೆ.

**ಈ ಪಾಠದ ಸಾರಾಂಶ**

ನಮ್ಮ ಮನೆತನದ ಮೂಲ ಪುರುಷನ ಹೆಸರು ಗೊತ್ತಿದೆಯೆ ? ಮನುಷ್ಯರಿಗೆಲ್ಲ ಮೂಲ ಪುರುಷನಾದವನು ಮನು. ಮನುವಿನ ಚರಿತ್ರೆಯು ಹೀಗಿರುವುದು. ಒಮ್ಮೆ ಮನು ಋಷಿಯು ಅರ್ಘ್ಯಕೊಡಲು ಬೊಗಸೆಯಲ್ಲಿ ನೀರು ತೆಗೆದುಕೊಂಡನು. ಅದರಲ್ಲಿ ಒಂದು ಮೀನು ಕಂಡಿತು. ನಾನು ನಿನಗಾಗಿ ಬದುಕಬೇಕೆಂದಿರುವೆನು. ಮುಂದೆ ಬರುವ ಗಂಡಾಂತರದಿಂದ ಪಾರುಮಾಡುವೆನು. ಅದಕ್ಕೆ ನನ್ನನ್ನು ದೊಡ್ಡವನನ್ನಾಗಿ ಮಾಡಿ ರಕ್ಷಿಸು, ಎಂದಿತು ಮೀನು. ಆ ಮೀನು ಹೇಳಿದಂತೆ ಮನುವು ಮಾಡಿದನು. ಕೆಲವೇ ದಿನಗಳಲ್ಲಿ ಅತಿ ಮಳೆಯಾಗಿ ಜಗತ್ತಿನ ತುಂಬ ನೀರೇ ನೀರಾಯಿತು. ಮನುವು ಹೌಹಾರಿದನು. ಮೀನದ ಮಾತು ನೆನಪಾಯಿತು. ಡೋಣಿ ತೆಗೆದುಕೊಂಡು ಆಹಾರ ಸಾಮುಗ್ರಿ ಹಾಕಿಕೊಂಡು ತಾನು ಅದರಲ್ಲಿ ಕುಳಿತನು. ದೋಣಿ ಸಾಗಿತು. ನದಿಯಿಂದ ಸಮುದ್ರಕ್ಕೆ ಬಂದಿತು. ಮನುವು ಮೀನವನ್ನು ಧ್ಯಾನಿಸಿದನು. ಮೀನು ಬಂದಿತು. ಅದು ಬೆಟ್ಟದ ಹಾಗೆ ಬೆಳೆದಿತ್ತು. ಅದರ ತಲೆಗೆ ಕೊಂಬು ಮೂಡಿತ್ತು. ಅದಕ್ಕೆ ದೋಣಿಯ ಹಗ್ಗ ಕಟ್ಟಿದನು. ಮೀನವು ಡೋಣಿಯನ್ನು ಮಹಾಮೇರು ಶಿಖರಕ್ಕೆ ಒಯ್ಯಿತು. ಇಲ್ಲಿ ಇರು. ನೀರು ಇಳಿದಂತೆ ಡೋಣಿಯ ಹಗ್ಗ ಸಡಲಿಸು ಎಂದು ಮೀನು ಹೇಳಿತು. ಮನು ಹಾಗೆ ಮಾಡಿದನು. ಭೂಲೋಕದಲ್ಲಿ ಆಗ ಗಿಡವಿಲ್ಲ, ಮರವಿಲ್ಲ; ಪಶುಪಕ್ಷಿಯಿಲ್ಲ; ತಾನೊಬ್ಬನೇ ಇದ್ದನು. ಮನುವು ಯಜ್ಞಮಾಡಿದನು. ಯಜ್ಞಕುಂಡದಲ್ಲಿ ಇಳಾ ಎಂಬ ಸುಂದರ ಸ್ತ್ರೀ ಹುಟ್ಟಿದಳು. ಮುಂದೆ ಗಿಡ ಮರ ಪ್ರಾಣಿಗಳು ಹುಟ್ಟಿದವು. ಹೊಸಬಾಳು ಆರಂಭವಾಯಿತು. ಹೊಸಬಾಳಿಗೆ ಜನ್ಮವಿತ್ತವನು ಮನು. ಅದರಿಂದ ನಮಗೆ ಮಾನವ ಎಂದು ಹೆಸರು ಬಂದಿದೆ.

**ಕಠಿಣ ಶಬ್ದಗಳ ಅರ್ಥ**

ಮೂಲಪುರುಷ—ಮೊಟ್ಟಮೊದಲಿನ ವ್ಯಕ್ತಿ. ಬಲಿಷ್ಠ—ಶಕ್ತಿವಂತ. ಮಹಾಪ್ರಳಯ—ಎಲ್ಲವೂ ಮುಳುಗಿಹೋಗುವ ಹಾಗೆ ಮಳೆಯಾಗುವುದು.

ಹೌಹಾರು—ಗಾಬರಿಯಾಗು. ಫಕ್ಕನೆ—ತಟ್ಟನೆ. ಬೆಟ್ಟ—ಗುಡ್ಡ ಜೀವದಾತೆ ಜೀವದಾನವಾಡಿದವ. ಇಳಾ——ಭೂಮಿ.

ಪ್ರಶ್ನೆ—ಉತ್ತರ

**ಪ್ರಶ್ನೆ : ೧** ಮೀನವು ತನ್ನನ್ನು ರಕ್ಷಿಸಲು ಋಷಿಗೆ ಏಕೆ ಹೇಳಿಕೊಂಡಿತು ?

ಉತ್ತರ: ಮೀನವು ಚಿಕ್ಕದಿತ್ತು. ಸ್ವಲ್ಪದಿನಗಳಲ್ಲಿ ಪ್ರಳಯಕಾಲ ಬರುವದಿದೆ ಎಂದು ಮೀನಕ್ಕೆ ಗೊತ್ತಿತ್ತು. ಋಷಿಯನ್ನು ಬದುಕಿಸಬೇಕೆಂದು ಮೀನು ತನ್ನನ್ನು ರಕ್ಷಿಸಿದರೆ ತಾನು ಮುಂದೆ ದೊಡ್ಡದಾದಮೇಲೆ ಪ್ರಳಯಕಾಲದಲ್ಲಿ ಋಷಿಯನ್ನು ರಕ್ಷಿಸುವುದಕ್ಕಾಗಿ ತನ್ನನ್ನು ರಕ್ಷಿಸಬೇಕೆಂದು ಕೇಳಿಕೊಂಡಿತು.

**ಪ್ರಶ್ನೆ : ೨** ಮನುವು ಹೌಹಾರಲು ಕಾರಣವೇನು ?

**ಉತ್ತರ** ಮಳೆ ಅತಿಯಾಯಿತು. ಇಂತಹ ಮಳೆಯನ್ನು ಮನುವು ನೋಡಿರಲಿಲ್ಲ ಪಶುಪಕ್ಷಿ ಪ್ರಾಣಿಗಳು ಸತ್ತು ತೇಲತೊಡಗಿದುವು. ಇಂತಹ ಮಳೆಯನ್ನು ನೋಡಿ ಮನುವು ಹೌಹಾರಿದನು.

**ಪ್ರಶ್ನೆ ೩** ಮೀನವು ಮನುವಿಗೆ ಹೇಗೆ ಸಹಾಯಮಾಡಿತು ?

ಉತ್ತರ : ಮೊದಲೆ ಸೂಚಿಸಿದಂತೆ ಮನುವು ಡೋಣಿಯಲ್ಲಿ ಆಹಾರ ಸಾಮಗ್ರಿ ಹಾಕಿಕೊಂಡು ಕುಳಿತನು. ಡೋಣಿ ನದಿಯಿಂದ ಸಮುದ್ರಕ್ಕೆ ಬಂದಿತು. ಮನುವು ಮೀನವನ್ನು ನೆನೆದನು. ಅದು ಬಂದಿತು. ಆದರ ತತಿಯ ಮೇಲಿನ ಕೊಂಬಿಗೆ ಡೋಣಿ ಹಗ್ಗ ಕಟ್ಟಲು ಹೇಳಿತು. ಮುಂದೆ ಮಹಾಮೆರು ಪರ್ವತಕ್ಕೆ ಡೋಣಿಯನ್ನು ಒಯ್ದು ನೀರು ಇಳಿದಹಾಗೆ ಹಗ್ಗ ಸಡಲಿಸು ಎಂದು ಹೇಳಿ ಮೀನು ಮನುವಿಗೆ ಸಹಾಯ ಮಾಡಿತು.

**ಪ್ರಶ್ನೆ : ೪** ನಮಗೆ ಮಾನವರೆಂಬ ಹೆಸರು ಏಕೆ ಬಂದಿದೆ ?

ಉತ್ತರ : ಮಹಾಪ್ರಳಯದ ನಂತರ ಹೊಸಬಾಳನ್ನು ಪ್ರಾರಂಭಿಸಿದವನು ಮನು. ಅವನಿಂದಲೇ ನಾವೆಲ್ಲ ಹುಟ್ಟಿಬಂದವರು. ಅದಕ್ಕೆ ನಮಗೆ ಮಾನವರೆಂಬ ಹೆಸರು ಬಂದಿದೆ.

**ಅಭ್ಯಾಸ :** ಮನುವು ಅಂತಹ ಮಳೆಯನ್ನು ನೋಡಿ ಹೌಹಾರಿರುತ್ತಾನೆ. ಬದುಕುವ ಆಸೆ ತೋಚುವುದಿಲ್ಲ. ಫಕ್ಕನೆ ಆವನಿಗೆ ಮೀನದ ಮಾತು ನೆನಪಾಗುತ್ತದೆ. ಡೋಣಿಯನ್ನು ತೆಗೆದುಕೊಂಡು ಆಹಾರ ಸಾಮಗ್ರಿಯನ್ನು ಅದರಲ್ಲಿ ತುಂಬಿ ನೀರಿನಲ್ಲಿ ಡೋಣಿಯನ್ನು ತೇಲಿಬಿಟ್ಟು ತಾನು ಕಣ್ಣುಮುಚ್ಚಿ ಕೂಡುತ್ತಾನೆ.

**ವ್ಯಾಕರಣ : ೨** ಕೆಳಗಿನ ವಾಕ್ಯಗಳನ್ನು ನಿಷೇಧವಾಕ್ಯಗಳನ್ನು ಮಾಡಿರಿ.

೧. ನೀನು ನನ್ನನ್ನು ನೀರಿನಲ್ಲಿ **ಬಿಡಬೇಡ.** ೨. ಡೋಣಿಯ ಹಗ್ಗವನ್ನು **ಸಡಲಿಸದಿರು.** ೩. ಮನು ಇಂತಹ ಮಳೆಯನ್ನು ನೋಡಿ **ಹೌಹಾರಲಿಲ್ಲ.** ೪. ಡೋಣಿಯು **ಸಾಗುವುದಿಲ್ಲ.** ೫. ಮೀನವು ಮುಳುಗಿ **ಮಾಯವಾಗಲಿಲ್ಲ.**

೬. ನಮಗೆ ಮಾನವರೆಂಬ ಹೆಸರು **ಬಂದಿಲ್ಲ**. ೭. ಪ್ರತಿಯೊಂದು ದೇಶದಲ್ಲಿ ಇಂತಹ ಕತೆಗಳು **ಇರುವುದಿಲ್ಲ**. ೮. ಭೂಮಿಯಲ್ಲೆಲ್ಲ ನೀರೇ ನೀರು **ಆಗಲಿಕ್ಕಿಲ್ಲ**. ೯. ನೀನು ಮಹಾಕಷ್ಟಕ್ಕೆ **ಒಳಗಾಗಲಾರೆ**. ೧೦. ಈ ಸೃಷ್ಟಿಯ ಮೂಲ ಪುರುಷನನ್ನು ಅರಿಯುವ ಕುತೂಹಲ **ಇರುವುದೇ** ಇಲ್ಲ.

**(೩)** ಕೆಳಗಿನ ನಿಷೇಧ ವಾಕ್ಯಗಳನ್ನು ಸಾಮಾನ್ಯ ವಾಕ್ಯಗಳನ್ನು ಮಾಡಿರಿ.

೧. ನಾನು ನಿನ್ನನ್ನು ನೀರಿನಲ್ಲಿ ಚೆಲ್ಲಲು **ಬಯಸುತ್ತೇನೆ**. ೨. ನೀನು ಭೂಲೋಕಕ್ಕೆ **ಬರುವೆ**. ೩. ಭೂಲೋಕದಲ್ಲಿ **ಗಿಡವಿದೆ; ಮರವಿದೆ**. ೪. ಆಗ ಒಂದು ಗೇಣು ಸ್ಥಳವಾದರೂ **ಸಿಕ್ಕುತ್ತದೆ**. ೫. ಬದುಕುವ ಆಸೆ ಅವನಿಗೆ **ತೋಚುತ್ತದೆ**.. ೬. ನೀನು ನನ್ನನ್ನು ನೀರಿನಲಿ **ಒಗೆ**. ೭. ಅಯ್ಯಾ ತಪಸ್ವಿಯೇ ಇದಕ್ಕಾಗಿ **ಚಿಂತಿಸು**.



## ೪ ಸ್ನಾನಸುಖ

**ಈ ಪಾಠದ ವಿಷಯವು ಯಾವುದು ?**

ನಾವು ನಿತ್ಯವೂ ಸ್ನಾನ ಏಕೆ ಮಾಡಬೇಕು ? ಸ್ನಾನದಲ್ಲಿ ಎಷ್ಟು ಬಗೆ ಇವೆ. ? ಸ್ನಾನದಿಂದ ಯಾವ ಸುಖ ಸಿಕ್ಕುತ್ತದೆ ? ಎಂಬುದನ್ನು ಇಲ್ಲಿ ಹೇಳಿದೆ.

**ಈ ಪಾಠದ ಸಾರಾಂಶ**

ಪಶು ಪಕ್ಷಿ ಪ್ರಾಣಿಗಳು ನೀರಿನಲ್ಲಿ ಆಡುವುದನ್ನು ನೋಡುತ್ತೇವೆ. ನಾಲ್ಕು ತಂಬಿಗೆಯಲ್ಲಿ ಸ್ನಾನ ಮುಗಿಸುವವರೂ ನೂರಾಯೆಂಟು ಕೊಡ ನೀರು ಸುರುವಿ ಕೊಂಡು ಸ್ನಾನ ಮಾಡುವವರೂ ಇದ್ದಾರೆ. ಸ್ನಾನವನ್ನು ಕಾಟಕ್ಕಾಗಿ ಮಾಡುವ ಜನರೇ ಬಹಳ. ನಿಜವಾದ ಸ್ನಾನವೆಂದರೆ ಅದರ ನಂತರ ಮನಸ್ಸಿಗೆ ಸೊಗಸು ಅನ್ನಿಸ ಬೇಕು. ಸ್ನಾನವು ಮನುಷ್ಯರಿಗೆ ಆರೋಗ್ಯ ಧರ್ಮವು. ಅಂತರಂಗ ಶುದ್ಧಿಗೆ ಬಹಿ ರಂಗ ಶುದ್ಧಿಯು ಆವಶ್ಯಕ. ಅರುಣೋದಯದ ಒಳಗೆ ತಣ್ಣೀರು ಸ್ನಾನ ಮಾಡು ವುದು ಉತ್ತಮ. ಸ್ನಾನದ ನಂತರ ಒಣ ಪಂಚೆಯಿಂದ ತಿಕ್ಕಿ ಒರಿಸಿಕೊಳ್ಳಬೇಕು. ಮೈಕಾವಿಗಿಂತ ಹೆಚ್ಚು ಬಿಸಿ ನೀರನ್ನು ಸ್ನಾನ ಮಾಡದಿರುವುದು ಒಳಿತು .ಸಾಬೂನು ಹಚ್ಚಿಕೊಂಡರೆ ಉರುಟುಬಟ್ಟೆಯಿಂದ ಒರಿಸಿಕೊಳ್ಳಬೇಕು. ಬಿಸಿನೀರಿನ ಸ್ನಾನದಿರಿದ ಮೈಗೆ ವಿಶ್ರಾಂತಿಸುಖದೊರೆಯುತ್ತದೆ. ಎರೆದುಕೊಳ್ಳುವುದು ರಾತ್ರಿ ಯಾದರೆ ಲೇಸು. ಗಾಂಧಿಯವರಿಗೆ ಸ್ನಾನವೆಂದರೆ ಬಲು ಮೆಚ್ಚು. ಜಪಾನಿಗಳಲ್ಲಿ ಸಾರ್ವಜನಿಕ ಸ್ನಾನಗೃಹಗಳಿರುತ್ತವೆ. ಪ್ರಾಚೀನಗ್ರೀಸದಲ್ಲಿಯೂ ಇದ್ದುವು. ಸಿಂಧೂ ನದಿತೀರದಲ್ಲಿಯ ಪ್ರಾಚೀನ ಪಟ್ಟಣವಾದ ಮೋಹೆಂಜೋದಾರೋದಲ್ಲಿ ಜಳಕದ ಮನೆ ಯೊಂದು ಅವಶೇಷವಾಗಿ ಸಿಕ್ಕಿದೆ. ರೋಗನಿವಾರಣೆಗಾಗಿ ಕಟಿ ಸ್ನಾನಮಾಡುವರು.

ಉಗಿಯಿಂದ ಸ್ನಾನಮಾಡಿಸುವ ಬಗೆಯೊಂದಿದೆ. ಬಿಸಲಿನ ಸ್ನಾನವೂ ಆರೋಗ್ಯಕ್ಕೆ ಒಳ್ಳೆಯದು. ಸ್ನಾನದಿಂದ ದೇಹ ಸ್ವಚ್ಛವಾಗುವಂತೆ ಮನಸ್ಸೂ ಪವಿತ್ರವಾಗುವುದು.

**ಕಠಿಣ ಶಬ್ದಗಳ ಅರ್ಥ**

ಉಜ್ಜು—ತಿಕ್ಕು. ಶೀತವಲಯ—ಶೀತಪ್ರದೇಶಗಳು. ಅರಬು—ಕೊರತೆ ಜಾಡ್ಯ—ಅಸ್ವಸ್ಥತೆ. ಕಟಿ—ಟೊಂಕ. ಬಾಷ್ಪಸ್ನಾನ—ಉಗಿಸ್ನಾನ. ಆತಪ—ಬಿಸಿಲು.

**ಕಠಿಣ ವಾಕ್ಯಗಳ ಅರ್ಥ**

ಕೇವಲ ಶಾಸ್ತ್ರಕ್ಕಾಗಿ ಜಳಕವು ಹೇಗೆ ಒಳಿತಲ್ಲವೊ ಹಾಗೆ ಬರಿಯ ಚೈನಿವಿಲಾಸಕ್ಕಾಗಿ ಜಳಕವೂ ಒಳಿತಲ್ಲ.

ಶಾಸ್ತ್ರಕ್ಕಾಗಿ ಜಳಕವೆಂದರೆ ಹೆಸರಿಗೆ ಜಳಕ. ಸ್ನಾನಮಾಡಬೇಕೆಂದು ಧರ್ಮಶಾಸ್ತ್ರ ಹೇಳುತ್ತದೆ. ಅದಕ್ಕೆ ಸ್ನಾನಮಾಡಿಬಿಟ್ಟರಾಯಿತು ಎಂದು ಹೆಸರಿಗೆ ಮೈಮೇಲೆ ನೀರು ಸುರುವಿಕೊಂಡರೆ ಸ್ನಾನಮಾಡಿದ ಹಾಗೆ ಇತರರಿಗೆ ತೋರಿದರೂ ಮೈ ಸ್ವಚ್ಛವಾಗುವುದಿಲ್ಲ. ಅದಕ್ಕಾಗಿ ಅಂತಹ ಸ್ನಾನ ಒಳಿತಲ್ಲ. ಇನ್ನು ಗಂಟೆಗಟ್ಲೆ ಚೈನಿಗಾಗಿ ಸ್ನಾನ ಮಾಡುವುದೂ ಒಳಿತಲ್ಲ. ಏಕೆಂದರೆ, ಹೆಚ್ಚು ಹೊತ್ತು ನೀರಲ್ಲಿ ಇರುವುದರಿಂದ ದೇಹದ ಉಷ್ಣತೆಯ ಮೇಲೆ ಪರಿಣಾಮವಾಗಿ ಅನಾರೋಗ್ಯವುಂಟಾಗುವುದು. ಅದಕ್ಕೆ ಎರಡೂ ಒಳಿತಲ್ಲ. ಸ್ನಾನವನ್ನು ದೇಹದ ಸ್ವಚ್ಛತೆಗೆ, ಮನಸೊಗಸಿಗೆ ಮಾಡಬೇಕು.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಕಾಟಕ್ಕಾಗಿ ಸ್ನಾನಮಾಡುವದೆಂದರೇನು ?

**ಉತ್ತರ :** ಸ್ನಾನಮಾಡದಿದ್ದರೆ ಇನ್ನೊಬ್ಬರು ಏನೆಂದಾರು ಎಂಬ ಹೆದರಿಕೆಯಿಂದ ಅವರ ಹೆದರಿಕೆಯ ಕಾಟಕ್ಕಾಗಿ ಸ್ನಾನಮಾಡುವುದು. ಮೈ-ಮನಗಳ ಸ್ವಚ್ಛತೆಗಾಗಿ ಅಲ್ಲ ಅಂತಹ ಬಲವಂತದ ಸ್ನಾನ ಕಾಟಕ್ಕಾಗಿ ಸ್ನಾನ.

**ಪ್ರಶ್ನೆ : ೨** ತಣ್ಣೀರಿನ ಸ್ನಾನದ ರೀತಿಯಾವುದು ?

**ಉತ್ತರ :** ತಣ್ಣೀರಿನ ಸ್ನಾನ ಮಾಡುವವರು ಅರುಣೋದಯದಕಿಂತ ಮೊದಲು ಮಾಡಬೇಕು. ಮನೆಯಲ್ಲಿ ಸ್ನಾನಮಾಡಬಹುದು; ಕೊಳದಲ್ಲಿ ಸ್ನಾನಮಾಡಬಹುದು. ಈಜುವುದು ಒಂದು ಶ್ರೇಷ್ಠ ಪ್ರಕಾರವಾಗಿದೆ. ತಣ್ಣೀರ ಸ್ನಾನಮಾಡಿದವರು ಮೈಯನ್ನು ಚೆನ್ನಾಗಿ ಒಣಪಂಜೆಯಿಂದ ಒರಿಸಿಕೊಳ್ಳಬೇಕು.

**ಪ್ರಶ್ನೆ : ೩** ಬಿಸಿನೀರಿನ ಸ್ನಾನದಿಂದ ಆಗುವ ಲಾಭವೇನು ?

**ಉತ್ತರ :** ನೀರು ಬಹಳಬಿಸಿ ಇರಬಾರದು. ಮೈಮೇಲಿನ ಬೆಮರು ಕರಗಿ ಹೋಗಲು ಸಾಕಾಗುವಷ್ಟು ಬಿಸಿ ಇದ್ದರೆ ಸಾಕು. ತುಸುಹೆಚ್ಚು ನೀರು ಬಿಸಿಯಾಗಿದ್ದರೆ ವಿಶ್ರಾಂತಿಸುಖವು ದೊರೆಯುತ್ತದೆ. ಎರೆದುಕೊಳ್ಳುವುದರಿಂದ ಮೈ ಮೃದುವಾಗಿರುವುದು.; ಹಗುರಾಗಿರುವುದು. ರಕ್ತ ಸಂಚಾರಕ್ಕೆ ಪ್ರೇರಣೆದೊರೆವುದು. ಮೈಯೊಳಗಿನ ಜಾಡ್ಯ ದೂರಾಗುವುದು. ಇವು ಬಿಸಿನೀರಿನ ಸ್ನಾನದಿಂದ ಆಗುವ ಲಾಭಗಳು.

**ಪ್ರಶ್ನೆ: ೪** ಅಭ್ಯಂಗಸ್ನಾನವೆಂದರೇನು ?

**ಉತ್ತರ:** ಮೈಗೆ ಚೆನ್ನಾಗಿ ಎಣ್ಣೆ ತಿಕ್ಕಿ ಉಣ್ಣಿಸಿ ನಂತರ ಬಿಸಿ ಬಿಸಿ ನೀರಿನಿಂದ ಸ್ನಾನಮಾಡುವುದೇ ಅಭ್ಯಂಗಸ್ನಾನ.

**ಪ್ರಶ್ನೆ: ೫** ರೋಗನಿವಾರಣೆಗಾಗಿ ಯಾವ ಸ್ನಾನವು ಉಪಯುಕ್ತವಾಗಿರುವುದು ?

**ಉತ್ತರ:** ರೋಗನಿವಾರಣೆಗೆ ಕಟಿಸ್ನಾನವು ಒಳ್ಳೆಯದು. ಇದು ಪ್ರಮುಖವಾದ ನಿಸರ್ಗೋಪಾಯಗಳಲ್ಲಿ ಒಂದಾಗಿದೆ. ಬಿಸಿಲಿನ ಸ್ನಾನವೂ ರೋಗನಿವಾರಣೆಗೆ ಉಪಯುಕ್ತವಾಗಿರುವುದು.

**ಪ್ರಶ್ನೆ: ೬** ಆತಪಸ್ನಾನದ ಮಹತ್ವವೇನು ?

**ಉತ್ತರ:** ಆತಪಸ್ನಾನವೆಂದರೆ ಬಿಸಿಲಿನಸ್ನಾನ. ಎಳೆಬಿಸಿಲಿನಲ್ಲಿ ವ್ಹಿಟಾಮಿನ್ ಡಿ ಎಂಬ ಜೀವನ ಸತ್ವವು ಇರುತ್ತದೆ. ಆದ್ದರಿಂದ ಆತಪಸ್ನಾನದಿಂದ ಆರೋಗ್ಯವು ಲಭಿಸುತ್ತದೆ.

**ಪ್ರಶ್ನೆ: ೭** ಸ್ನಾನಸುಖವು ಲಭಿಸಿತೆಂದು ಹೇಗೆ ತಿಳಿದುಕೊಳ್ಳಬೇಕು ?

**ಉತ್ತರ:** ಸ್ನಾನದಿಂದ ದೇಹವು ಸ್ವಚ್ಛವಾಗಬೇಕು. ಮನಸ್ಸು ಪವಿತ್ರವಾಗಬೇಕು. ಮನಸ್ಸಿಗೆ ಶಾಂತಿಯೂ ಸಮಾಧಾನವೂ ದೊರೆಯಬೇಕು. ಆಗ ಅದು ನಿಜವಾದ ಸ್ನಾನ. ಆಗ ಸ್ನಾನದಿಂದ ಸುಖವು ಲಭಿಸಿತೆಂದು ತಿಳಿಯಬೇಕು.

**ಅಭ್ಯಾಸ:** ೧ ನೀವೇ ಬರೆಯಿರಿ.

**೨** ೧. ಆರೋಗ್ಯಧರ್ಮ**ವಾ**ಗಿರುವುದು ೨. ಹಂ**ಡೆಯೂ**ದರೂ
೩. ನಿಮಗೇನು. ೪. ಸದ್ವಕ್ಕಂತೂ. ೫. ಮೀಸಲಾಗಿಟ್ಟಿದ್ದರು.

**ವ್ಯಾಕರಣ:** ೧ ಕರ್ಮಪದ ವಿದ್ದರೆ ೧. ಇಲ್ಲದಿದ್ದರ ೨ ಅಂಕಿಹಾಕಿರಿ.

೧—೧. ೨—೨. ೩—೨. ೪—೨. ೫—೧. ೬—೨. ೭—೧. ೮—೨. ೯—೧. ೧೦—೧.

೨. ಕೆಳಗೆ ಕೊಟ್ಟ ಕ್ರಿಯಾಪದಗಳನ್ನು ಉಪಯೋಗಿಸಿ ಅವು ಸಕರ್ಮಕವೇ ಅಕರ್ಮಕವೇ ಹೇಳಿರಿ.

೧. ಭಗವಂತನು ನಿನ್ನ ಇಷ್ಟಾರ್ಥಗಳನ್ನು **ನೆರವೇರಿಸಲಿ** **ಸ**
೨. ಗುರುಹಿರಿಯರ ಮಾತನ್ನು **ಕೇಳು**— ಸ
೩. ನರ್ಮದೆಗೆ ಹೋದರೆ ಕರ್ಮ **ಹರಿ**ದೀತೆ— ಅ
೪. ಬಸವೇಶ್ವರರು ಬಾಗೇವಾಡಿಯಲ್ಲಿ **ಹುಟ್ಟಿ**ದರು— ಅ
೫. **ಮೂಡಿ**ಹುದು ಮುಗಿನಲ್ಲಿ ಮಳೆಬಿಲ್ಲು— ಅ
೬. ನಿನ್ನ ಇಚ್ಛೆಯನ್ನು ಪೂರ್ಣ **ಮಾಡಿಕೋ**— ಸ

**ನೆನಪಿಗಾಗಿ :** ಸ್ನಾನದಿಂದ ದೇಹವು ಸ್ವಚ್ಛವಾಗುವಂತೆ ಮನಸ್ಸೂ ಪವಿತ್ರವಾಗುವುದು.



# ೫ ವೀರ ಸುಭಾಸಚಂದ್ರ ಬೋಸ

**ಈ ಪಾಠದ ವಿಷಯವು ಯಾವುದು ?**

ಸುಭಾಸಚಂದ್ರ ಬೋಸರು ಏನೇನು ಕೆಲಸ ಮಾಡಿದರು ? ಅವರು ವೀರರು ಎಂದು ಹೇಗೆ ಅನ್ನಿಸಿಕೊಂಡರು ? ಅವರ ಚರಿತೆ ಇಲ್ಲಿ ಹೇಳಲಾಗಿದೆ.

**ಈ ಪಾಠದ ಸಾರಾಂಶ**

ದೇಶಸೇವೆಗಾಗಿ ಜೀವ ಸವೆಸಲು ಒಪ್ಪಿ ಪಣತೊಟ್ಟಿದ್ದೀರಿ. ಈಗ ಹಿಂಜರಿಯುತ್ತಿದ್ದೀರಿ. ನಾನಂತೂ ಹೊರಟೆನು. ಎಂದು ನಿಶ್ಚಯದ ಧನಿಯಲ್ಲಿ ಮಾತನಾಡಿದ ಕಾಲೇಜ ತರುಣನು ಸುಭಾಸಚಂದ್ರ ಬೋಸನು. ಕಲಕತ್ತೆಯ ಬಳಿಯಲ್ಲಿ ಹಬ್ಬಿದ ಮಾರೀ ಬೇನೆಯ ಕಾಲಕ್ಕೆ ಸ್ವಯಂಸೇವಕರಾಗಿ ಬರಲು ಗೆಳೆಯರನ್ನು ಕೇಳುತ್ತಿದ್ದನು. ಸುಭಾಸರು ತಂದೆಯ ಮಾತಿಗೆ ಕಿವಿಗೊಡದೆ ಹೋದರು. ಸ್ವಾಮಿ ವಿವೇಕಾನಂದರಿಂದ ಸ್ಫೂರ್ತಿಪಡೆದವರು ಇವರು. ಆಪತ್ತಿನಲ್ಲಿರುವವರಿಗೆ ನೆರವಾಗಲೇಬೇಕು. ಎಂಬ ಅವರ ಶ್ರದ್ಧೆಯು ಯಾವ ಸಂಕಟಕ್ಕು ಬೆದರದೆ ಮುನ್ನಡೆವ ಪ್ರೇರಣೆ ಕೊಡುತ್ತಿತ್ತು. ೧೯೨೦ ರಲ್ಲಿಯ ಅಸಹಕಾರದ ಚಳವಳಿಯು ಇವರಿಗೆ ಉತ್ಸಾಹಕೊಟ್ಟಿತು. ಬಂಗಾಲದ ದೇಶಬಂಧು ಚಿತ್ತರಂಜನ ದಾಸರ ನಾಯಕತ್ವದಲ್ಲಿ ಸುಭಾಸರು ದೇಶಸೇವೆ ಆರಂಭಿಸಿದನು. ಇವರು ಕ್ರಾಂತಿಕಾರಕ ಸಂಘಟಕರು ಎಂದು ೧೯೨೪ ರಲ್ಲಿ ಸೆರೆಮನೆಗೆ ಕಳಿಸಲಾಯಿತು. ಸುಭಾಸಚಂದ್ರರ ವಿಚಾರವು ಮಹಾತ್ಮಾ ಗಾಂಧೀಜಿಯವರ ವಿಚಾರದಿಂದ ಬೇರೆಯಾಗಿತ್ತು. ೧೯೪೧ ರ ಜನವರಿಯಲ್ಲಿ ಸುಭಾಸರು ತಮ್ಮ ಕೋಣೆಯಿಂದ ಮಾಯವಾದ ಸುದ್ಧಿಯು ದೇಶದಲ್ಲಿ ಹರಡಿತು. ಸುಭಾಸರು ಪಠಾಣ ವೇಷ ಧರಿಸಿ ಹಿಂದುಸ್ತಾನದಿಂದ ಕಾಬೂಲಕ್ಕೆ ಹೊರಟುಹೋಗಿದ್ದರು. ಮುಂದೆ ಜರ್ಮನಿಗೆ ಹೋದರು. ಅಲ್ಲಿ ಹಿಂದಿ ಸೈನ್ಯದ ಸಂಘಟನೆ ಆರಂಭಿಸಿದರು. ಜಪಾನದವರು ಜರ್ಮನಿಯ ಪಕ್ಷ ವಹಿಸಿದ್ದರು. ಸುಭಾಸರು ಜಪಾನಕ್ಕೆ ಹೋದರು. ೧೯೪೩ ರಲ್ಲಿ ಸಿಂಗಾಪುರಕ್ಕೆ ಬಂದರು. ಅಝಾದ ಹಿಂದ ಸೈನ್ಯ ಸಂಘಟಿಸಿದರು. ೧೯೪೪ ರಲ್ಲಿ ಅವರು ಗಾಂಧೀಜಿಯ ಆಶೀರ್ವಾದ ಕೋರಿದರು : ಭಾರತದ ಸ್ವಾತಂತ್ರ್ಯಕ್ಕಾಗಿ ನನ್ನ ಪ್ರಾಣವನ್ನು ಮುಡಿಪಾಗಿರಿಸಿದ್ದೇನೆ. ಭಾರತದ ಉದ್ಧಾರಕ್ಕಾಗಿ ಹೂಡಿದ ಈ ಪವಿತ್ರ ಸಮರದಲ್ಲಿ ಆಶೀರ್ವಾದ ಕೇಳುವೆನು. ಜಯ ಹಿಂದ. ಸ್ವಾತಂತ್ರ್ಯ ಸಮರದ ಕಾಲದಲ್ಲಿ ಸುಭಾಸರು ೧೯೪೫ ರ ಆಗಸ್ಟದಲ್ಲಿ ವಿಮಾನ ಅಪಘಾತಕ್ಕೀಡಾಗಿ ಮರಣ ಹೊಂದಿದರು.

**ಕಠಿಣ ಶಬ್ದಗಳ ಅರ್ಥ**

ಪಣತೊಡು—ಪ್ರತಿಜ್ಞೆಮಾಡು. ಮಾರೀಬೇನೆ—ಕಾಲರಾ. ನೇತೃತ್ವ—ಮುಂದಾಳುತನ. ವ್ಯವಹಾರ್ಯ—ಸಮಯಕ್ಕೆ ಯೋಗ್ಯ. ಜಲಾಂತರ್ಗಾಮಿ—ನೀರೊಳಗೆ ಮುಳುಗಿಯೆ ಸಾಗುವ ಹಡಗ-ಸಬ್‌ಮರೀನ್.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಕಾಲೇಜ ವಿದ್ಯಾರ್ಥಿಗಳು ತೊಟ್ಟ ಪಣವನ್ನು ಒರೆಗೆ ಹಚ್ಚಲು ಒದಗಿದ ಪ್ರಸಂಗವಾವುದು ?

**ಉತ್ತರ :** ಕಲಕತ್ತೆಯ ಸಮೀಪದ ಹಳ್ಳಿಯಲ್ಲಿ ಮಾರೀಬೇನೆಯ ಪಿಡುಗು ಹಬ್ಬಿತ್ತು. ಅಲ್ಲಿ ಸ್ವಯಂಸೇವಕರಾಗಿ ಹೋಗುವ ಪ್ರಸಂಗವೇ ವಿದ್ಯಾರ್ಥಿಗಳು ತೊಟ್ಟ ಪಣವನ್ನು ಒರೆಗೆ ಹಚ್ಚುವಂತಹದಿತ್ತು.

**ಪ್ರಶ್ನೆ : ೨** ಸುಭಾಸರು ತಮ್ಮ ತಂದೆಯ ಮಾತನ್ನು ಏಕೆ ಲೆಕ್ಕಿಸಲಿಲ್ಲ ?

**ಉತ್ತರ :** ಮಗನಿಗೆ ಮಾರೀಬೇನೆ ಅಂಟಿಕೊಂಡೀತೆಂದು ತಂದೆ ಬೇಡವೆಂದಿದ್ದರು. ಆಪತ್ತಿನಲ್ಲಿರುವ ಜನರ ಗೋಳಾಟವನ್ನು ಕಂಡು ಸುಖದಿಂದಿರುವುದು ತರುಣ ಸುಭಾಸರಿಗೆ ಅಶಕ್ಯವಾಯಿತು. ಸ್ವಾಮಿ ವಿವೇಕಾನಂದರಿಂದ ಸ್ಫೂರ್ತಿಪಡೆದ ಸುಭಾಸರಿಗೆ ಕೇವಲ ಸ್ವಂತದ ಸಲುವಾಗಿ ಬದುಕುವುದು ಹೀನತನವೆನ್ನಿಸಿತು. ಅಪಕ್ಕೆ ಅವರು ತಂದೆಯ ಮಾತನ್ನು ಲೆಕ್ಕಿಸಲಿಲ್ಲ.

**ಪ್ರಶ್ನೆ : ೩** ಸುಭಾಸರು ತಮ್ಮ ಹುದ್ದೆಗೆ ರಾಜೀನಾಮೆಯನ್ನು ಕೊಡಲು ಕಾರಣವೇನು ?

**ಉತ್ತರ :** ಪರಕೀಯ ಸರಕಾರದ ಸೇವೆಯನ್ನು ಮಾಡಲು ಮನಸ್ಸು ಒಪ್ಪದೆ ಆಯ್. ಸಿ. ಎಸ್. ಕ್ಕೆ ರಾಜೀನಾಮೆ ಕೊಟ್ಟರು.

**ಪ್ರಶ್ನೆ : ೪** ಸುಭಾಸರು ಭಾರತದಿಂದ ಪರದೇಶಕ್ಕೆ ಏಕೆ ಹೋದರು ?

**ಉತ್ತರ :** ಗಾಂಧಿಮಾರ್ಗದಿಂದ ಸ್ವರಾಜ್ಯ ಸಿಗಲಾರದೆಂದು ಅವರ ಅಭಿಪ್ರಾಯ. ಬ್ರಿಟಿಶರ ವಿರುದ್ಧ ಯುದ್ಧ ಹೂಡಿದವರ ಗೆಳತನದಿಂದ ಸೈನ್ಯಕಟ್ಟಿ ಸ್ವಾತಂತ್ರ್ಯ ಪಡೆಯಬೇಕೆಂದು ಭಾರತದಿಂದ ಸುಭಾಸರು ಪರದೇಶಕ್ಕೆ ಹೋದರು.

**ಪ್ರಶ್ನೆ : ೫** ಅಝೂದಹಿಂದ ಸೇನೆ ಎಂದರೇನು ?

**ಉತ್ತರ :** ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಹಿಂದೀಸೇನೆ ಎಂದು ಆದಕ್ಕೆ ಅಝೂದ ಹಿಂದ ಸೇನೆ ಎಂದು ಕರೆದರು.

**ಪ್ರಶ್ನೆ : ೬** ಗಾಂಧೀಜಿ ಮತ್ತು ಸುಭಾಸ ಇವರಿಬ್ಬರಲ್ಲಿ ಇದ್ದ ಮತಭೇದ ವಾವುದು ?

**ಉತ್ತರ :** ಗಾಂಧೀಜಿ ಅಹಿಂಸಾವಾದಿ; ಸುಭಾಸರು ಕ್ರಾಂತಿವಾದಿ. ಅಹಿಂಸೆಗೆ ಅವರು ಕಟ್ಟುಬೀಳುವವರಲ್ಲ. ಇದೇ ಅವರಿಬ್ಬರಲ್ಲಿ ಇದ್ದ ಮತಭೇದ.

**ಪ್ರಶೆ ೭** ಗಾಂಧೀಜಿಯವರಲ್ಲಿದ್ದ ತಮ್ಮ ಆದರವನ್ನು ಸುಭಾಸರು ಹೇಗೆ ವ್ಯಕ್ತಪಡಿಸಿದರು ?

**ಉತ್ತರ** ೧೯೪೪ರಲ್ಲಿ ಸುಭಾಸರ ಅಝಾದ ಹಿಂದ ಸೈನ್ಯ ಭಾರತದ ಹದ್ದಿನಲ್ಲಿ ಬರುವುದರಲ್ಲಿತ್ತು. ಆಗ ಸುಭಾಸರು ಗಾಂಧಿಜಿಯ ಆಶೀರ್ವಾದ ಕೇಳಿದರು. “ನಾನು ಭಾರತದ ಮರ್ಯಾದೆಗೆ ಕುಂದು ತರುವ ಯಾವ ಕೆಲಸವನ್ನು ಮಾಡಿಲ್ಲ. ಭಾರತದ ಸ್ವಾತಂತ್ರ್ಯಕ್ಕಾಗಿ ಪ್ರಾಣವನ್ನು ಮುಡುಪಾಗಿರಿಸಿದ್ದೇನೆ. ಈ ಪವಿತ್ರ ಸಮರದಲ್ಲಿ ರಾಷ್ಟ್ರಪಿತನೆ, ನಿನ್ನ ಆಶಿರ್ವಾಧವನ್ನು ಕೋರುವೆನು. ಜಯಹಿಂದ” ಎಂದು ಆಶೀರ್ವಾದ ಕೋರಿ ಗಾಂಧಿಜಿಯಲ್ಲಿದ್ದ ತಮ್ಮ ಆದರವನ್ನು ವ್ಯಕ್ತಮಾಡಿದ್ದಾರೆ.

**ಅಭ್ಯಾಸ :** ಪ್ರಬಂಧಪಾಠಗಳಲ್ಲಿಯ ಪ್ರಶ್ನೆಗಳಿಗೆ ನೀವೇ ಉತ್ತರ ಬರೆಯಿರಿ. ಈ ಮಾಲೆಯ ಐದನೆಯ ಪುಸ್ತಕದಲ್ಲಿ ಕೆಲವು ಪಾಠಗಳು ಬಂದಿವೆ. ಅವನ್ನು ಓದಿರಿ.

**ನೆನಪಿಗಾಗಿ :** ೧. ಸತ್ಕಾರ್ಯ ಮಾಡುವಾಗ ಬರುವ ಕಷ್ಟ ನಷ್ಟಗಳನ್ನು ಇದಿರಿಸುವುದರಲ್ಲಿಯೆ ನಿಜವಾದ ಪೌರುಷವಿದೆ.

೨. ಮತಭೇದವೆಂದರೆ ದ್ವೇಷವಲ್ಲ.

೩. ಕೇವಲ ಸ್ವಂತದ ಸುಖಕ್ಕಾಗಿ ಬೆದರುವುದು **ಹೀನತನ**.



## ೬ ಹಲ್ಲಿ

**ಈ ಪಾಠದ ವಿಷಯವು ಯಾವುದು ?**

ಹಲ್ಲಿಯು ಎಂತಹಪ್ರಾಣಿ ? ಇದೇ ಜಾತಿಯ ಪ್ರಾಣಿಗಳು ಯಾವು ? ಹಲ್ಲಿ ತನ್ನ ಆಹಾರವನ್ನು ಹೇಗೆ ಪಡೆಯುತ್ತದೆ ? ಮನೆಯಲ್ಲಿ ಹಲ್ಲಿಯು ಯಾವ ಉಪಯುಕ್ತಕೆಲಸ ಮಾಡುತ್ತದೆ ? ಮುಂತಾಗಿ ಹೇಳಿದೆ.

**ಈ ಪಾಠದ ಸಾರಾಂಶ**

ನನ್ನ ನಿತ್ಯದ ಸ್ನೇಹಿತರಲ್ಲಿ ಹಲ್ಲಿಯೂ ಒಂದು. ಹಲ್ಲಿಗಳಿಗೆ ಮನೆಗಳೆಂದರೆ ಪ್ರೀತಿ. ಮೊಸಳೆ–ಉಡು–ಹಲ್ಲಿ ಅಕ್ಕತಂಗಿಯರು. ಇವು ಮನೆಮಾಡಿಕೊಂಡು ಇದ್ದುದಕ್ಕೆ ಕತೆಯೊಂದು ಇದೆ. ಓತಿಕಾಟ-ಹಾವುರಾಣಿ ಇವುಗಳಿಗೆ ದೂರದ ತಮ್ಮಂದಿರಾಗಬೇಕು. ನಮ್ಮ ಪೂರ್ವಿಕರು ಹಲ್ಲಿಯನ್ನು ಜೋಯಿಸನೆಂದು ಭಾವಿಸುತ್ತಿದ್ದರು. ಹಲ್ಲಿ ಶಕುನ ಎಂಬ ಹೆಸರಿನ ಅನೇಕ ಪುಸ್ತಕಗಳು ಹಲ್ಲಿಯ ಮಹಾತ್ಮೆಯನ್ನು ಹೇಳುತ್ತವೆ. ಹಿಂದುಗಳು ಹಲ್ಲಿಯನ್ನು ದುರ್ಗಾದೇವಿಯಂತೆ ಭಾವಿಸಿದ್ದಾರೆ. ಹಲ್ಲಿ ಗೋಡೆಯೇರುವ ಸಾಹಸವನ್ನು ಯಾವ ಗರಡಿಸಾಧಕನೂ ಮಾಡಲಾರ. ಒಂದೊಂದು ಕಾಲಿಗೆ ೫ ಕಿರಿಬೆರಳುಗಳು ಬೆರಳುಗಳ ತುದಿಗೆ ಉಗುರು. ಹಲ್ಲಿಗೆ ಪಾದದ ಕೆಳಕ್ಕೆ ಸಿಂಬಿ

ಯಂತಿದೆ, ಗೋಡೆಗೆ ಅಂಟಿಕೊಳ್ಳಲು ಇದು ಸಹಾಯ ಮಾಡುತ್ತದೆ. ಚುಕ್ಕಾಣಿಯು ದೋಣಿಯನ್ನು ಬೇಕಾದ ಕಡೆಗೆ ತಿರುಗಿಸುವಂತೆ ಬಾಲವು ಹಲ್ಲಿಗೆ ಓಡಾಟದಲ್ಲಿ ಸಹಾಯವಾಗುತ್ತದೆ. ಹಲ್ಲಿ ದೀಪತ್ತುತ್ತಲೇ ರಂಗಭೂಮಿಗೆ ಬರುತ್ತದೆ. ಪತಂಗಗಳನ್ನು ಹಿಡಿಯುತ್ತವೆ. ಹಲ್ಲಿಗೆ ಕಿವಿಯಿಲ್ಲ ಆದರೆ ಕಣ್ಣಿನ ಹಿಂದೆ ತೂತು ಇರುತ್ತದೆ. ಇದೇ ಸಪ್ಪಳ ಕೇಳಲು ನೆರವಾಗುತ್ತದೆ. ಹಲ್ಲಿ ಸತ್ತಹುಳಗಳನ್ನು ತಿನ್ನದು. ಜೀವಿದ್ದಾಗ ತಿನ್ನುತ್ತದೆ. ಕ್ರಿಮಿಕೀಟಕಗಳನ್ನು ತಿಂದು ಮನೆಗಳನ್ನು ಸ್ವಚ್ಛವಾಗಿಡುತ್ತದೆ.

**ಕಠಿಣ ಶಬ್ದಗಳ ಅರ್ಥ**

ಸಲಕರಣೆ—ಸಾಮುಗ್ರಿ. ಕಲಿಕಾಲ—ಕಲಿಯುಗ. ಓತಿ—ಓತಿಕಾಟ. ಅತ್ಯಾಚಾರ—ಹಿಂಸೆ. ಗೌಳಿ—ಹಲ್ಲಿ. ಕೂರುಗುರು—ಚೂಪಾದಉಗುರು. ಹದನ—ಹರಿತ; ಚೂಪಾದ. ಇಕ್ಕಡೆ—ಎರಡುಕಡೆ. ರಂದ್ರ—ತೂತು.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಹಲ್ಲಿಯ ಅಕ್ಕತಂಗಿಯರು ಮತ್ತು ತಮ್ಮಂದಿರು ಯಾರು ?

**ಉತ್ತರ :** ಹಲ್ಲಿಯ ಅಕ್ಕತಂಗಿಯರು ನೊಸಳೆ, ಉಡು. ಓತಿಕಾಟ ಮತ್ತು ಮತ್ತು ಹಾವುರಾಣಿ ತಮ್ಮಂದಿರು.

**ಪ್ರಶ್ನೆ : ೨** ನಮ್ಮ ಪೂರ್ವಜರಲ್ಲಿ ಹಲ್ಲಿ ಎಂದರೆ ಜೋಯಿಸ ಎಂಬ ಭಾವನೆ ಏಕೆ ಇತ್ತು ?

**ಉತ್ತರ :** ಅದು ನುಡಿದರೆ, ಬಿದ್ದರೆ, ಅದಕ್ಕೆ ಒಂದೊಂದು ಭಾವಿಕತನದ ಅರ್ಥವಿರುತ್ತಿತ್ತು. ಹಲ್ಲಿಯು ಶಕುನ ನುಡಿಯುತ್ತಹೆಂದು ಭಾವನೆ ಇದ್ದಿತಾದುದರಿಂದ ಅದಕ್ಕೆ ಜೋಯಿಸ ಎಂದು ಅನ್ನುತ್ತಿದ್ದರು.

**ಪ್ರಶ್ನೆ: ೩** ಗೋಡೆಯನ್ನು ಏರುವಾಗ ಹಲ್ಲಿಯು ಬೀಳುವದಿಲ್ಲವೇಕೆ ?

**ಉತ್ತರ;** ಹಲ್ಲಿಯ ಕಾಲಿಗೆ ಚೂಪಾದ ಉಗುರುಗಳು ಇರುವುವು. ಇವು ಗೋಡೆಯನ್ನು ಗಟ್ಟಿಯಾಗಿ ಹಿಡಿಯುವುವು. ಅದಲ್ಲದೆ ಕಾಲಕೆಳಗೆ ಸಿಂಬಿಯಂತೆ ಇರುತ್ತದೆ. ಇದೂ ಗೋಡೆಯನ್ನು ಹಿಡಿದುಕೊಳ್ಳುತ್ತವೆ. ಆದಕ್ಕೆ ಗೋಡೆಯನ್ನು ಏರುವಾಗ ಹಲ್ಲಿ ಕೆಳಗೆ ಬೀಳುವುದಿಲ್ಲ.

**ಪ್ರಶ್ನೆ : ೪** ಹಲ್ಲಿಯು ಬೇಟೆಯನ್ನು ಹೇಗೆ ಹಿಡಿಯುತ್ತದೆ?

**ಉತ್ತರ :** ಒತ್ತಟ್ಟಿಗೆ ಸುಮ್ಮನೆ ಇರುತ್ತದೆ. ಸಮೀಪ ಯಾವುದಾದರೂ ಕ್ರಿಮಿಕೀಟ ಹಾದರೆ ಆದನ್ನು ಗಪ್ಪನೆ ಹಿಡಿದು ತಿನ್ನುತ್ತದೆ. ಬೇಟೆ ಎಲ್ಲಿದೆ ಎಂಬದನ್ನು ಕಣ್ಣು ಆಗಲಾಗಿಸಿ ನೋಡುತ್ತದೆ. ಕಣ್ಣಿನ ಹತ್ತಿರದ ತೂತುಗಳಿಂದ ಸಪ್ಪಳ ಕೇಳಿ ತಿಳಿಯುತ್ತದೆ. ಹೀಗೆ ತಿಳಿದುಕೊಂಡು ತನ್ನ ತಲೆಗಿಂತಲೂ ದೊಡ್ಡದಾಗಿರುವ ಹುಳುಗಳನ್ನು ಕೂಡ ತುತ್ತು ತುತ್ತಾಗಿ ನುಂಗಿಬಿಡುವುದು.

**ಪ್ರಶ್ನೆ : ೫** ಹಲ್ಲಿಯು ಉಪಯುಕ್ತ ಪ್ರಾಣಿಯು ಹೇಗೆ ?

**ಉತ್ತರ :** ಮನೆಯಲ್ಲಿರುವ-ಮತ್ತು ಬರುವ ಅಸಂಖ್ಯ ಕ್ರಿಮಿಕೀಟಗಳನ್ನು ಹಲ್ಲಿ ತಿನ್ನುವುದು ಅದಿಲ್ಲದಿದ್ದರೆ ಅಷ್ಟು ಕ್ರಿಮಿಕೀಟಗಳ ಬಾಧೆಯಾಗುತ್ತಿತ್ತು. ಅದಕ್ಕೆ ಹಲ್ಲಿ ಬಹು ಉಪಯುಕ್ತ ಪ್ರಾಣಿ.

**ಅಭ್ಯಾಸ :** ೧ ನೀವೇ ಮಾಡಿರಿ.

೨. ನಾವಿಬ್ಬರೂ ಗೆಳೆಯರು ಕೂಡಿ ಮಾಡಿಕೊಂಡ ಗುಟ್ಟನ್ನು ಗೋವಿಂದನು ಅರಿತನು. ಯೋಗಿಯು ಧ್ಯಾನಾರೂಢನಾಗಿರುತ್ತಾನೆ. ಒಂಟೆಯು ಗಿಡದ ಹಸಿರನ್ನು ಮೇಯುವಾಗ ಕತ್ತನ್ನು ನೀಡುತ್ತದೆ. ಭಲೆರೆ ಜಟ್ಟಿ, ಎಂದ ಕೂಡಲೇ ಅವನು ಮಣ್ಣು ಮುಕ್ಕಿದನಂತೆ. ಗಾಂಧೀಜಿಯವರು ಯಾವುದೇ ಅತ್ಯಾಚಾರವನ್ನು ತಡೆದು ಕೊಳ್ಳುತ್ತಿದ್ದಿಲ್ಲ.

**ವ್ಯಾಕರಣ :** ೨ ಅಂಕಿತನಾಮಗಳು ೧. ಭೀಮ, ೨. ಕಾಳಿಂಗರಾಯ, ೩. ಚೆನ್ನವ್ವ, ೪ ರಾವಣ, ೫. ಭರತೇಶ.

೩. ರೂಢನಾಮಗಳು ೧ ಯುಗ, ೨ ದೇಶ, ೩ ನದಿ, ೪ ನಗರ,

೪ (ಅ) ನೀವೇ ಮಾಡಿರಿ. (ಬ) ಅಂಕಿತನಾಮಗಳು : ಜನಕರಾಯ, ಲವ, ಕುಶ, ಸೀತಾದೇವಿ. ರೂಢನಾಮಗಳು: ಮಗಳು, ಬನ, ತೊಟ್ಟಿಲ, ವನವಾಸ.

(ಇ) ಹೇಕರಿಕೆ—ಕುದುರೆ. ಬೊಗಳಿಕೆ—ನಾಯಿ. ಕೇಕೆ—ನವಿಲು. ಡುರಕೆ—ಹೋರಿ. ಕೂಗು—ಕೋಳಿ. ಲೊಟಲೊಟ—ಹಲ್ಲಿ. ಚಿಲಿಪಿಲಿ—ಗುಬ್ಬಿ. ಗುಡುಗು—ಸಿಂಹ.

೫. (೧) ರಾಷ್ಟ್ರಗಳ ಸಂಘ; (೨) ದಾಸರ ಕೂಟ (೩) ಮರಗಳ ತೋಪು (೪) ತುರುಗಳ ಹಿಂಡು.



## ೭ ದಾನ ಚಿಂತಾಮಣಿ ಅತ್ತಿಮಬ್ಬೆ.

**ಈ ಪಾಠದ ವಿಷಯವು ಯಾವುದು ?**

ಅತ್ತಿಮಬ್ಬೆ ಯಾರು ? ಅವಳು ಮಾಡಿದ ಲೋಕ ಕಲ್ಯಾಣ ಕಾರ್ಯಗಳು ಯಾವು ? ಅವಳಿಗೆ ದಾನ ಚಿಂತಾಮಣಿ ಎಂಬ ಹೆಸರು ಹೇಗೆ ಬಂದಿತು ? ಎಂದು ಮುಂತಾಗಿ ಇಲ್ಲಿ ಹೇಳಿದೆ.

**ಈ ಪಾಠದ ಸಾರಾಂಶ**

ಪುಂಗನೂರ ವೆಂಗಿಮಂಡಲದಲ್ಲಿಯ ಕಮ್ಮನಾಡಿನಲ್ಲಿಯ ಊರು. ಅದು ಅತ್ತಿಮಬ್ಬೆಯ ತವರೂರು. ಅವಳ ತಂದೆ ಮಲ್ಲಪ. ತಂದೆಯ ಮನೆಯಲ್ಲಿ ಅವಳಿಗೆ ಉದಾತ್ತವಾದ ಸಂಸ್ಕಾರಗಳು ದೊರೆತವು. ಅತ್ತಿಮಬ್ಬೆಗೆ ಗುಂಡಮಬ್ಬೆ ಎಂಬ ತಂಗಿ ಇದ್ದಳು. ಚಾಲುಕ್ಯರ ಮಂತ್ರಿಯಾದ ನಾಗದೇವನು ಅಭಿನವ ಕಾಮದೇವನ ಹಾಗೆ

ಇದ್ದನು. ಅತ್ತಿಮಬ್ಬೆ-ಗುಂಡಮಬ್ಬೆಯರು ನಾಗದೇವನನ್ನು ಮದುವೆಯಾದರು. ನಾಗದೇವನನ್ನು ಪತಿಯಾಗಿ ಪಡೆದ ಅತ್ತಿಮಬ್ಬೆಯ ಭಾಗ್ಯಕ್ಕೆ ಎಣೆಯೇ ಇರಲಿಲ್ಲ. ಅತ್ತಿಮಬ್ಬೆಗೆ ಅಣ್ಣಿದೇವ ಎಂಬ ಮಗನು ಹುಟ್ಟಿದನು. ಮುಂದೆ ಕೆಲಕಾಲದನಂತರ ನಾಗದೇವನು ತೀರಿದನು. ಗುಂಡಮಬ್ಬೆಯು ಸಹಗಮನ ಹೋದಳು. ಅತ್ತಿಮಬ್ಬೆಯು ಕಠೋರವ್ರತ ಕೈಕೊಂಡು ಧರ್ಮವೇ ಸರ್ವಸ್ವವೆಂದು ನಂಬಿ ಜೀವನವನ್ನು ನೂಕತೊಡಗಿದಳು. ಮಾನವವಂಶಕ್ಕೆ ಆಧಾರವಾಗಲು ಯತ್ನಿಸಿದಳು. ಅನವರತ ದಾನ ಮಾಡತೊಡಗಿದಳು. ಈಕೆಯ ದಾನಗಳು ಹಿಂದಿನ ಮಹಾಮಹಾ ದಾನಿಗಳ; ಸಾಮಂತರ, ಅರಸರ ದಾನಗಳನ್ನು ಮಿಕ್ಕು ಮೀರಿದವು. ಇದಕ್ಕಾಗಿ ಅವಳಿಗೆ ದಾನಚಿಂತಾಮಣಿ ಎಂಬ ಬಿರುದು ಬಂದಿತು. ಪೊನ್ನನ ಶಾಂತಿಪುರಾಣದ ಸಾವಿರಪ್ರತಿಮಾಡಿಸಿ ಹಂಚಿದಳು. ರನ್ನನಿಗೆ ಆಶ್ರಯವಿತ್ತು ಅಜಿತನಾಥ ಪುರಾಣವನ್ನು ಬರೆಯಿಸಿದಳು. ತನ್ನ ಸಂಪತ್ತನ್ನು ವಿದ್ಯಾಪ್ರಸಾರಕ್ಕಾಗಿ ಉಪಯೋಗಿಸಿದ ದಾನಚಿಂತಾಮಣಿ ಅತ್ತಿಮಬ್ಬೆಯು ಇಂದಿಗೂ ಮೇಲ್ಪಂಕ್ತಿಯಾಗಿದ್ದಾಳೆ.

**ಕಠಿಣ ಶಬ್ದಗಳ ಅರ್ಥ**

ಅಬ್ಬೆ—ಅವ್ವೆ; ಅವ್ವ. ಹಳವು—ಅಡವಿ. ವಿಶುದ್ಧ—ವಿಶೇಷ ಶುದ್ಧ. ಸ್ವಧರ್ಮರತಿ—ತನ್ನ ಧರ್ಮದಲ್ಲಿ ಇರುವುದು. ಕಂಟಕ—ಮುಳ್ಳು. ಎಟ್ಟತನ—ಎದುರುತನ ತೋರುವ ಗಟ್ಟಿಗತನ. ಅಭಿನವಕಾಮ—ಪ್ರತಿಯಾದ ಕಾಮನಂತೆ. ಚಮೂಪತಿ—ಸೇನಾಪತಿ. ಇಂಬಾಗು—ಅನುವಾಗು. ಪುತ್ಥಳಿ—ಮೂರ್ತಿ. ಸಂವರ್ಧನೆ—ಬೆಳಿಗೆ. ಶ್ರಾವಿಕಾಧರ್ಮ—ಜೈನ ಸಂನ್ಯಾಸಿನಿಯ ಧರ್ಮ. ಸುರುಚಿರ—ಸುಂದರ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಅತ್ತಿಮಬ್ಬೆ ತವರುಮನೆಯಲ್ಲಿ ಪಡೆದ ಸದ್ಗುಣಗಳಾವು ?

ಉತ್ತರ: ವಿಶುದ್ಧವಾದ ನಡೆನುಡಿ, ನಯವಿನಯ, ಗುರುಜನರಲ್ಲಿ ಆದರ, ಸ್ವಧರ್ಮರತಿ ಮುಂತಾದ ಸದ್ಗುಣಗಳನ್ನು ಅತ್ತಿಮಬ್ಬೆ ತವರುಮನೆಯಲ್ಲಿ ಪಡೆದಳು.

**ಪ್ರಶ್ನೆ : ೨** ನಾಗದೇವನಿಗೆ ಒರಟಮಲ್ಲ ಎಂಬ ಬಿರುದು ಏಕೆ ಬಂದಿದೆ ?

**ಉತ್ತರ :** ಚಾಲುಕ್ಯರ ಅರಸೊತ್ತಿಗೆಗೆ ಕಂಟಕರಾಗಿ ಇದುರುತನ ತೋರುವಂತಹ ಒರಟುತನವುಳ್ಳ ತುಂಟರನ್ನು ದಂಡಿಸಿ ಮಣಿಸಿದುದಕ್ಕೆ ನಾಗದೇವನಿಗೆ ಒರಟರಮಲ್ಲ ಎಂಬ ಬಿರುದು ಬಂದಿತು.

**ಪ್ರಶ್ನೆ : ೩** ಗುಂಡಮಬ್ಬೆಯು ತನ್ನ ಅಕ್ಕನ ಮೇಲಿನ ಪ್ರೇಮವನ್ನು ಹೇಗೆ ತೋರಿದಳು ?

**ಉತ್ತರ :** ನಾಗದೇವನನ್ನು ಅಕ್ಕತಂಗಿಯರು ಮದುವೆಯಾಗಿದ್ದರು. ನಾಗದೇವನು ತೀರಿಕೊಂಡ ಕೂಡಲೆ ಹಿರಿಯ ಹೆಂಡತಿಯಾದ ಅತ್ತಿಮಬ್ಬೆ ತಾನು ಸಹಗ

ಮನ ಹೋಗುವುದಾಗಿ ಹೇಳಿದಳು. ಮಗನನ್ನು ಇಟ್ಟುಕೊಂಡು ನೀನು ಇರು ನಾನು ಸಹಗಮನ ಹೋಗುವೆನೆಂದು ಗುಂಡಮಬ್ಬೆಯು ಸಹಗಮನ ಹೋದಳು. ಇದರಿಂದ ಅವಳು ತನ್ನ ಅಕ್ಕನ ಮೇಲೆ ಇದ್ದ ಪ್ರೇಮವನ್ನು ತೋರಿಸಿದಳು.

**ಪ್ರಶ್ನೆ :** ೪ ಅತ್ತಿಮಬ್ಬೆಯು ಲೋಕಕಲ್ಯಾಣಕ್ಕಾಗಿ ಕೈಕೊಂಡ ಕಾರ್ಯಗಳಾವು ?

**ಉತ್ತರ :** ಸಮಾಜವೇ ತನ್ನ ಕುಟುಂಬವೆಂದು ತಿಳಿದು ಮಾನವ ವಂಶಕ್ಕೆ ಆಧಾರವಾಗಲು ಪ್ರಯತ್ನಿಸಿದಳು. ಜಿನಮತವು ಬೆಳೆಯುವಂತೆ ಮಾಡಿದಳು.

**ಪ್ರಶ್ನೆ :** ೫ ಅತ್ತಿಮಬ್ಬೆಗೆ ದಾನಚಿಂತಾಮಣಿ ಎಂಬ ಬಿರುದು ಬರಲು ಕಾರಣವೇನು ?

**ಉತ್ತರ :** ಅತ್ತಿಮಬ್ಬೆಯು ಉದಾರ ಹಸ್ತದಿಂದ ದಾನಮಾಡಿದಳು. ಈಕೆಯ ದಾನಗಳು ಹಿಂದಿನ ಮಹಾದಾನಿಗಳ, ಸಾಮಂತರ ಅರಸರ ದಾನಗಳನ್ನು ಮಿಕ್ಕು ಮೀರಿದವು. ಇದಕ್ಕಾಗಿ ದಾನಚಿಂತಾಮಣಿ ಎಂಬ ಬಿರುದು ಈಕೆಗೆ ಸಲ್ಲುವಂತಾಯಿತು.

**ಪ್ರಶ್ನೆ :** ೬ ಜ್ಞಾನಪ್ರಸಾರದ ಕಾರ್ಯದಲ್ಲಿ ಅತ್ತಿಮಬ್ಬೆ ಮಾಡಿದ ಕಾರ್ಯಗಳಾವು ?

**ಉತ್ತರ :** ಪೊನ್ನನ ಶಾಂತಿ ಪುರಾಣದ ಸಾವಿರ ಪ್ರತಿಗಳನ್ನು ಮಾಡಿಸಿ ಹಂಚಿದಳು. ರನ್ನನಿಗೆ ಆಶ್ರಯ ಕೊಟ್ಟು ಅವನಿಂದ ಅಜಿತನಾಥ ಪುರಾಣವನ್ನು ಬರೆಯಿಸಿದಳು. ಇವು ಅವಳು ಮಾಡಿದ ವಿದ್ಯಾಪ್ರಸಾರದ ಕಾರ್ಯಗಳು.

**ಪ್ರಶ್ನೆ :** ೭ ಅತ್ತಿಮಬ್ಬೆಯನ್ನು ಇಂದಿಗೂ ನಾವು ಏಕೆ ಸ್ಮರಿಸುತ್ತೇವೆ ?

**ಉತ್ತರ :** ಅವಳು ಮಾಡಿದ ಜನಸೇವೆ, ಧರ್ಮಸೇವೆ, ಇವು ಲೋಕಕಲ್ಯಾಣದ ಕಾರ್ಯಗಳಾದುವು. ತನ್ನ ಸಂಪತ್ತನ್ನು ವಿದ್ಯಾಪ್ರಸಾರಕ್ಕಾಗಿ ಉಪಯೋಗಿಸಿದಳು. ಈ ವಿಷಯದಲ್ಲಿ ಅವಳು ಮೇಲ್ಪಂಕ್ತಿಯಾಗಿದ್ದಾಳೆ. ಅದಕ್ಕಾಗಿ ನಾವು ಇಂದಿಗೂ ನೆನೆಯುತ್ತೇವೆ.

**ಅಭ್ಯಾಸ :** ೧ ಅಮೃತದ ಹೊಳೆಯಲ್ಲಿ ವಿಷಹಾಕಿದರೆ ಅಮೃತವೂ ಕೂಡ ವಿಷವಾಗುವುದು. ಹಾಲಿನಲ್ಲಿ ಹುಳಿ ಹಿಂಡಿದರೆ ಹಾಲು ಕೆಡುವುದು. ಒಳ್ಳೆಯ ವಾತಾವರಣವನ್ನು ಸಣ್ಣ ವಿಷಯದಿಂದ ಕೆಡಿಸುವುದು.

೨ ವಿದ್ಯಾರ್ಥಿಗಳೇ, ಪ್ರತಿ ಶನಿವಾರ ಗಣಿತಕ್ಕಾಗಿ ನಿಮಗೆ ೨ ಗಂಟೆ ಮೀಸಲಾಗಿದ್ದೇನೆ. ರಾಮಾನ್ನರು ವಿಜ್ಞಾನಕ್ಕಾಗಿ ತಮ್ಮ ಜೀವನವನ್ನು ಧಾರೆಯೆರೆದಿದ್ದಾರೆ. ಶಿಕ್ಷಕರು ಸಹಾನುಭೂತಿ ತೋರಿದರೆ ಬಾಲಕರ ಬೆಳಿಗೆಗೆ ಇಂಬು ಕೊಟ್ಟಂತಾಗುವುದು. ಚಿಕ್ಕ ವಯಸ್ಸಿನಲ್ಲಿ ಕಲಿತ ಸದ್ಗುಣಗಳು ಚೆನ್ನಾಗಿ ಬೇರೂರುವುವು. ವರುಷವೆಲ್ಲವೂ ಮಾಡಿದ ಅಭ್ಯಾಸ ಫಲವು ಹಣ್ಣಾಗಿ ಪರೀಕ್ಷೆಯಲ್ಲಿ ಯಶಬಂತು.

**ವ್ಯಾಕರಣ :** ೩ ಅನ್ವರ್ಥಕ ನಾಮಗಳು : ದಾನಚಿಂತಾಮಣಿ, ಒರಟಮಲ್ಲ, ಕಾಮಧೇನು. ಭಾವನಾಮ: ಅರಸೊತ್ತಿಗೆ, ಸೊಗಸು, ಏರುಂಜವ್ವನ ವಿಲಾಸವಿಭ್ರಮ.

೪ ಅನ್ವರ್ಥಕ : ಅಂಗಡಿಕಾರ, ಹೂಗಾರ, ಗಾಣಿಗ, ಹಾವಾಡಿಗ, ಜೋಯಿಸ. ಭಾವನಾಮ : ಮಹಾತ್ಮೆ, ಭಕ್ತಿ, ಸುಖ, ಸ್ವೈರಣೆ, ಪ್ರೌಢಿಮೆ.

೫ ೧. ಸಿಂಪಿಗ, ೨. ಉಪ್ಪಾರ, ೩. ಕುಂಬಾರ, ೪. ಕಮ್ಮಾರ, ೫. ಕರಣಿಕ, ೬. ಹಾಲಿನವ, ೭. ಒಕ್ಕಲಿಗ.



## ೬ ಮುಂಬಯಿಯ ವರ್ಣನೆ

**ಈ ಪಾಠದ ವಿಷಯ ಯಾವುದು ?**

ಹೊಸಬರು ಮುಂಬಯಿಗೆ ಬಂದರೆ ಏನು ಅನ್ನಿಸುವುದು ? ಹಳ್ಳಿ ಜೀವನಕ್ಕೆ ಮುಂಬಯಿ ಜೀವನಕ್ಕೆ ಅಂತರವೇನು ? ಮುಂಬಯಿಯಲ್ಲಿ ಶಿಸ್ತು ಸಂಯಮ ಹೇಗಿದೆ ? ಮುಂತಾಗಿ ಹೇಳಿದೆ. ಇದು ಒಂದು ಪತ್ರ.

**ಈ ಪಾಠದ ಸಾರಾಂಶ**

ಅಣ್ಣನ ಜತೆಯಲ್ಲಿ ಇಲ್ಲಿಗೆ ನಾನು ಸುರಕ್ಷಿತವಾಗಿ ಬಂದು ಮುಟ್ಟಿದೆನು. ಮುಂಬಯಿ ನೋಡಬೇಕೆಂಬ ಬಯಕೆ ಈಡೇರಿತು. ನಮ್ಮ ಚಿಕ್ಕ ಹಳ್ಳಿಗಿಂತ ಈ ನಗರವು ಎಷ್ಟು ಬೇರೆಯಾಗಿದೆ. ಎಲ್ಲಿ ನೋಡಿದಲ್ಲಿ ಐದಾರು ಅಂತಸ್ತಿನ ಮನೆಗಳು. ನಸುಕಿನಿಂದ ನಡುರಾತ್ರಿಯವರೆಗೆ ಜನರ ಅಲೆದಾಟ, ಓಡಾಟ ಸಾಗಿರುತ್ತದೆ. ಬೀದಿಯನ್ನು ದಾಟುವುದು ಕಠಿಣ ಕೆಲಸ. ಇಲ್ಲಿ ಎರಡಂತಸ್ತಿನ ಬಸ್ಸುಗಳು ಇವೆ. ಟ್ರಾಮು ಎಂಬ ಹೆಸರಿನ ವಾಹನವು ಇದೆ. ಸಮುದ್ರವನ್ನು ನೋಡಲು ಸಿಕ್ಕಿತು. ಒಂದುದಿನ ಭಾರತದ ಹೆಬ್ಬಾಗಿಲಿಗೆ ಹೋಗಿದ್ದೆ. ಇನ್ನೊಂದುದಿನ ಜಲಚರ ಸಂಗ್ರಹಾಲಯಕ್ಕೆ ಹೋಗಿದ್ದೆವು. ಇಲ್ಲಿಯ ಗಡಿಬಿಡಿ ನೋಡುವಂತಹದು. ಸುಮ್ಮನೆ ಕುಳಿತವರೇ ಇಲ್ಲ. ಇಷ್ಟು ಜನ ಇದ್ದರೂ ಎಲ್ಲವೂ ಸರತಿಯಂತೆ ಶಿಸ್ತಿನಿಂದ ಇಲ್ಲಿ ಕೆಲಸ ನಡೆವುದು. ನಗರದ ಇನ್ನೊಂದು ಭಾಗವನ್ನು ನೋಡಿದಾಗ ಮುಂಬಯಿ ಎಂದರೆ ಇಂದ್ರನ ಅಮರಾವತಿ ಎಂಬ ವಿಚಾರ ಹಾರಿಹೋಗಿ ಇಲ್ಲಿಯೂ ನರಕವಿದೆ ಎಂದು ತಿಳಿದು ಬರುವುದು. ಮುಂದಿನ ಪತ್ರದಲ್ಲಿ ಮತ್ತೆ ನೋಡಿದ್ದನ್ನೆಲ್ಲ ಬರೆಯುತ್ತೇನೆ.

**ಕಠಿಣ ಶಬ್ದಗಳ ಅರ್ಥ**

ಹಾತೊರೆ — ಆತುರದಿಂದ ದಾರಿಕಾಯು. ಬೆಪ್ಪಾಗು — ಹುಚ್ಚಾಗು. ಜಲಚರ — ನೀರಲ್ಲಿರುವ ಪ್ರಾಣಿ.

೧. ಮುಂಬಯಿಯೆಂದರೆ ಇಂದ್ರನ ಅಮರಾವತಿಯೆಂದು ನಾನು ತಿಳಿದುಕೊಂಡಿದ್ದೆನು. ಆದರೆ ಇಲ್ಲಿಯೂ ನರಕದ ನೆರಳು ಬಿದ್ದಿದೆ ಎಂಬುದು ಗೊತ್ತಾಯಿತು.

ಮುಂಬಯಿಯು ದೊಡ್ಡ ಊರು. ಅಲ್ಲಿ ಅನೇಕ ಭಾಗಗಳು. ಯಾವ ಯಾವ ಕೆಲಸಗಳು ಎಲ್ಲಿ ಎಲ್ಲಿ ನಡೆಯುವುವು, ಯಾರು ಯಾರು ಎಲ್ಲಿ ವಾಸವಾಗಿರುವರು,

ಇದರಮೇಲಿಂದ ಅಲ್ಲಲ್ಲಿಯ ಅಚ್ಚುಕಟ್ಟುತನ, ಓರಣ, ಹೊಲಸು-ಸ್ವಚ್ಛತೆ ಇವು ಕಂಡು ಬರುವುವು. ಕೋಟೆಯಭಾಗ, ಸಿರಿವಂತರ ವಸತಿಭಾಗಗಳು ಇಂದ್ರನ ಅಮರಾವತಿಯಂತೆ ಅನ್ನಿಸುವುವು. ಆದರೆ ಬಡಜನರು ಇರುವ ಸ್ಥಳ, ತಿಳಿವಳಿಕೆ ಇಲ್ಲದ ಜನ ಇರುವ ಸ್ಥಳ, ಇವು ಹೊಲಸು ಇವೆ. ಮುಂಬಯಿ ಯಾದರೇನು ಅದೂ ಊರಲ್ಲವೆ? ಊರಿದ್ದಲ್ಲಿ ಹೊಲಸುಕೇರಿ ಇರುವುದೆ.

**ಪ್ರಶ್ನೆ-ಉತ್ತರ**

**ಪ್ರಶ್ನೆ : ೧** ಮುಂಬಯಿ ನೋಡಿದ ಹಳ್ಳಿಗರು ಏಕೆ ಬೆಪ್ಪಾಗುತ್ತಾರೆ?

**ಉತ್ತರ :** ಮುಂಬಯಿಯಲ್ಲಿ ಐದಾರು ಅಂತಸ್ತಿನ ಕಟ್ಟಡಗಳು. ಹಳ್ಳಿಗರು ದೊಡ್ಡ ಮನೆ ನೋಡಿದ್ದರೂ ಇಷ್ಟು ಅಂತಸ್ತಿನ ಮನೆಗಳನ್ನು ನೋಡಿರುವುದಿಲ್ಲ. ಅದಕ್ಕೆ ಮೊದಲುಸಲ ನೋಡಿದಾಗ ಅವರು ಭ್ರಾಂತರಾಗುವರು. ಅಚ್ಚರಿಯಿಂದ ಹುಚ್ಚಾಗುವರು.

**ಪ್ರಶ್ನೆ : ೨** ಶಾಂತಣ್ಣನು ಮುಂಬಯಿಯಲ್ಲಿ ನೋಡಿದ ವಾಹನಗಳು ಯಾವು?

ಉತ್ತರ : ಶಾಂತಣ್ಣನು ಎರಡಂತಸ್ತಿನ ಬಸ್ಸುಗಳನ್ನು ಹಳಿಯ ಮೇಲೆ ಓಡಾಡುವ ಟ್ರಾಮುಗಳನ್ನು ನೋಡಿದನು.

**ಪ್ರಶ್ನೆ : ೩** ಮುಂಬಯಿ ಜನರು ಶಿಸ್ತಿನಿಂದ ಹೇಗೆ ವರ್ತಿಸುವರು ?

**ಉತ್ತರ :** ಬಸ್ಸು ಹತ್ತುವುದಿರಲಿ, ಬೀದಿ ದಾಟುವುದಿರಲಿ, ಇಲ್ಲಿಯ ಜನರು ಶಾಂತರೀತಿಯಿಂದ ಸಾಲಾಗಿ ನಿಂತು ಸರತಿಯ ಪ್ರಕಾರ ಹೋಗುವರು. ಹೀಗೆ ಮಾಡುವುದರಿಂದ ಗದ್ದಲವೂ ಆಗದು; ಎಲ್ಲರಿಗೂ ಸರತಿ ದೊರೆವುದು. ಇದು ಮುಂಬಯಿ ಜೀವನದ ಶಿಸ್ತು.

**ಅಭ್ಯಾಸ :** ೧ ಜಲಚರ ಪ್ರಾಣಿ ಸಂಗ್ರಹಾಲಯದಲ್ಲಿ ನಾನಾ ತರದ ಸಣ್ಣ ದೊಡ್ಡ ಮೀನಗಳು, ಬಗೆಬಗೆಯ ಏಡಿಗಳು, ಕಪ್ಪೆಗಳು. ಇವು ಜೀವಂತವಾಗಿರುವುವು. ನೀರಿನಲ್ಲಿ ಯಾವ ಸ್ಥಿತಿಯಲ್ಲಿ ಅವು ಬಾಳುವುವೊ ಹಾಗೆಯೆ ಇಲ್ಲಿ ಅವುಗಳನ್ನು ಇಡಲಾಗಿದೆ. ಇದರಿಂದ ಜಲಚರಗಳ ಜೀವನದ ಬಗ್ಗೆ ತಿಳಿವು ಉಂಟಾಗುವುದು.

೨. ಇದನ್ನು ನೀವೇ ಬರೆಯಿರಿ.

೩. ಕೂಲಿಕಾರರಿಗೆ ಸ್ವಚ್ಛತೆಯ ಪಾಠಗಳನ್ನು ಕೊಟ್ಟು ತಮ್ಮ ಪರಿಸರ ಸ್ವಚ್ಛವಾಗಿಡುವಂತೆ ಮಾಡಿಸಲಾಗುತ್ತದೆ. ವಸತಿಗಳನ್ನು ಕಟ್ಟಿ ಜನದಟ್ಟಣೆಯನ್ನು ಸರಕಾರವು ಕಡಿಮೆ ಮಾಡುತ್ತಲಿದೆ.

**ಪ್ರಬಂಧ ಪಾಠ :** ಇಲ್ಲಿ ನಿಮ್ಮ ಅನುಭವಗಳ ವರ್ಣನೆ ಬರೆಯಲು ಹೇಳಲಾಗಿದೆ. ಅದನ್ನು ಬರೆವಾಗ ನಿಮ್ಮ ಅನುಭವಗಳು ಏನಾದುವು ಎಂಬುದನ್ನು ನೆನಪಿಗೆ ತಂದುಕೊಳ್ಳಿರಿ. ಶಾಂತಣ್ಣ ಪತ್ರದಲ್ಲಿ ಬರೆದಂತೆ, ಕಟ್ಟಡಗಳು, ವಾಹನಗಳು, ಬೀದಿ

ಗಳು, ಜನರ ಶಿಸ್ತು, ಸಂಯಮ, ಅವರು ಇರುವ ರೀತಿ ಮುಂತಾದ ವಿಷಯಗಳನ್ನು ಬರೆಯಿರಿ.



## ೯-೧೦ ಮುದ್ದು

**ಈ ಪಾಠಗಳ ವಿಷಯವು ಯಾವುದು ?**

ಈ ಎರಡೂ ಪಾಠಗಳೂ ಕೂಡಿ ಒಂದು ಕತೆ. ಅದಕ್ಕೆ ಎರಡನ್ನು ಕೂಡಿಸಿ ಇಲ್ಲಿ ತೆಗೆದುಕೊಳ್ಳಲಾಗಿದೆ. ಮಗುವೊಂದು ನಾಯಿ ಮರಿಯ ಸಂಗಡ ಸಲುಗೆ ಮಾಡುತ್ತದೆ. ಒಂದಕ್ಕೊಂದು ಪ್ರೀತಿ ಬೆಳೆದು ಅವು ಅಗಲುವವೆಂದರೆ ಕರಳು ಕಿವುಚುತ್ತದೆ. ಆದರೆ ಹಿರಿಯರಿಗೆ ಮಗು-ಮರಿಗಳ ಪ್ರೀತಿಯ ಆಳ ತಿಳಿವುದಿಲ್ಲ; ಅಲ್ಲದೆ ಅವರ ಪರಿಸ್ಥಿತಿಯು ವಿಚಿತ್ರವಾಗಿರುತ್ತದೆ ಅದಕ್ಕೆ ಮರಿಯನ್ನು ಬಿಟ್ಟುಬಿಡಲು ಮಗನಿಗೆ ಹೇಳಬೇಕಾಗುತ್ತದೆ. ಮಗುವಿನಲ್ಲಿ ಮರಿಯಲ್ಲಿ ಉಂಟಾದ ಭಾವನೆಗಳು ಯಾವು ? ತಾಯಿತಂದೆಗಳಲ್ಲಿ ಉಂಟಾದ ಭಾವನೆಗಳು ಯಾವು ? ಇವುಗಳ ಬಗ್ಗೆ ಇದೊಂದು ಸುಂದರವಾದ ಕತೆಯಿದೆ.

**ಈ ಪಾಠದ ಸಾರಾಂಶ**

ನಾನೂ ನಿಮ್ಮ ಸಾಲೆಗೆ ಬರುತ್ತೇನೆ ವಸಂತಾ. ನಿನ್ನ ಸರ್ಟಿಫಿಕೇಟು ತೆಗೆದುಕೊಳ್ಳಬೇಕಾಗಿದೆ. ನಾವು ಈ ಊರು ಬಿಡಬೇಕಾಗಿದೆ, ಎಂದನು ತಂದೆ. ಇವರ ನವಪರಿ ಹೋಯಿತಪ್ಪಾ ವಸಂತಾ, ಎಂದಳು ತಾಯಿ. ಹಾಗಾದರೆ ನಾವು ಹಳ್ಳಿಗೆ ಹೋಗುವುದೇ ಎಂದು ಕೇಳಿದ ವಸಂತ. ಹಳ್ಳಿಯು ಬಲುಮೋಜು ಎಂದು ವಸಂತನು ಸಂತೋಷಪಟ್ಟನು. ಊರಿಗೆ ಹೋದಕೂಡಲೆ ನಾನು ನನ್ನ ನಾಯಿ ಮುದ್ದುವನ ಕರೆದುಕೊಂಡು ಬೇಟೆಯಾಡಲು ಹೋಗುವೆನು, ಅಪ್ಪಾ, ಎಂದನು ವಸಂತ. ನಾಯಿಗೆ ರೊಟ್ಟಿ ತಿನ್ನಿಸಿ ಅದನೊಡನೆ ನಾಳಿನ ಜೀವನದ ಮಾತುಗಳನ್ನು ಆಡತೊಡಗಿದನು. ನಾಯಿ ಹೆಸರಿಗೆ ತಕ್ಕಂತೆ ಮುದ್ದಾಗಿತ್ತು. ಒಮ್ಮೆ ಸಾಲೆಯಿಂದ ಬರುವಾಗ ಮನೆಗೆ ತಂದಿದ್ದ. ಕಳೆದ ಎಂಟುತಿಂಗಳಿಂದ ಅದು ಅವನ ಜೀವದ ಗೆಳೆಯ ಆಗಿತ್ತು. ಇವನು ಶಾಲೆಗೆ ಹೋಗಲಿ, ಆಡಲು ಹೋಗಲಿ, ಅದು ಜತೆಯಲ್ಲಿ ಇರುವುವೆ ! ತಂದೆ ತಾಯಿ ಇಬ್ಬರು ಊರಿಗೆ ಹೊರಡುವುದಕ್ಕೆ ಸಾಮಾನು ಕಟ್ಟತೊಡಗಿದರು. ಮುದ್ದನ ಹಾಸಿಗೆಯನ್ನು ತರಲೇನು ಎಂದು ವಸಂತನು ತಂದೆಯನ್ನು ಕೇಳಿದನು. ನಮಗೇ ಉಪವಾಸ ಬೀಳುವ ಪ್ರಸಂಗ ಬಂದಿದೆ, ನಿನ್ನ ಹಾಳ ಮುದ್ದನ್ನ ತೆಗೆದುಕೊಂಡೇನು ಮಾಡುವುದು ಎಂದು ತಂದೆ ರೇಗಿದನು. ರೈಲಿನಲ್ಲಿ ನಾಯಿಯನ್ನು ಬಿಡುವುದಿಲ್ಲ ಮಗು ಎಂದು ಹೇಳಿದಳು ತಾಯಿ. ವಸಂತನಿಗೆ ಇದು ಯಾವುದೂ ಅರ್ಥವಾಗಲಿಲ್ಲ. ಅವನಿಗೆ ಅದೇ

ಮಾತು. ಕೊನೆಗೆ ತಂದೆ ಮಗನನ್ನು ಹೊಡೆದರು. ಅದರಿಂದ ವಿಷಯವು ಇನ್ನು ಹದಗೆಟ್ಟಿತು. ಕುದುರೆಗಾಡಿ ಬಂದಿತು. ಸಾಮಾನು ಹಾಕಿ ತಾವೂ ಹತ್ತಿದರು. ವಸಂತನ ಕೈಯಿಂದ ನಾಯಿಮರಿಯನ್ನು ಕಸಿದು ಎಸೆದು ಅವನನ್ನು ಕರೆದುಕೊಂಡು ಸ್ಟೇಶನ್ನಿಗೆ ಬಂದರು. ಗಾಡಿಹತ್ತಿದರು. ನಾಯಿ ಓಡುತ್ತ ಬಂದು ಪ್ಲಾಟಫಾರ್ಮಿನ ಮೇಲೆಯೂ ಬಂತು. ಒಳಗೆ ವಸಂತನ ಅಳು. ಹೊರಗೆ ನಾಯಿಯ ಒರಲು. ಗಾಡಿಬಿಟ್ಟಿತು. ನಾಯಿ ಗಾಡಿಬೆನ್ನಟ್ಟಿ ತಾಯಿಕಳೆದುಕೊಂಡ ಮಗನಂತೆ ಸಣ್ಣ ಮುಖಮಾಡಿಕೊಂಡು ವಿಕಾರವಾಗಿ ಊಳಿಡುತ್ತ ಮನೆಗೆ ಹೋಯಿತು.

**ಕಠಿಣ ಶಬ್ದಗಳ ಅರ್ಥ**

ವಾಡಿಕೆ—ದಿನದ ರೂಢಿ. ಇಷ್ಟ—ಇಚ್ಛೆ. ಅಂಧಕಾರ—ಕತ್ತಲೆ. ಸಹಪಾಠಿ — ಜತೆಗೆ ಅಭ್ಯಾಸ ಮಾಡುವ ವಿದ್ಯಾರ್ಥಿ. ನೆಗೆದಾಡು—ಜಿಗಿದಾಡು. ಪ್ರದರ್ಶಿಸು—ತೋರು. ಸೌಕರ್ಯ—ಅನುಕೂಲತೆ. ಗಾಢಸ್ನೇಹ—ಬಹಳ ಸ್ನೇಹ. ಒಡಹುಟ್ಟಿದ—ಜತೆಯಾಗಿ ಹುಟ್ಟಿದ. ಇರುಳು—ರಾತ್ರಿ. ದಿಗಿಲುಗೊಂಡು—ಏನುಮಾಡಬೇಕೆಂದು ತಿಳಿಯದ ಹಾಗೆ ಆಗಿ. ಒಳಸಂಚು—ಗುಪ್ತವಾಗಿ ಮಾಡಿಕೊಂಡ ವಿಚಾರಯೋಜನೆ. ಊಳಿಡು—ನಾಯಿಯ ಕಳವಳದ ಬೊಗಳಿಕೆ. ಅಡರತೊಡಗಿತು—ಮೈಮೇಲೆ ಏರು. ಆಕ್ರೋಶ—ಅಳು.

**ಪ್ರಶ್ನೆ—ಉತ್ತರ** ೯ ನೆಯ ಪಾಠ.

**ಪ್ರಶ್ನೆ : ೧** ಮುದ್ದು ವಸಂತನ ಒಡಹುಟ್ಟಿದ ತಮ್ಮನು ಹೇಗೆ ?

**ಉತ್ತರ :** ಮುದ್ದು ವಸಂತನ ಉಣಿಸು ತಿನಿಸುಗಳಲ್ಲಿ ಭಾಗಿಯಾಗುತ್ತಿತ್ತು. ಅವನ ಮನೆಯಲ್ಲಿಯೇ ಇರುತ್ತಿತ್ತು. ಅವನ ಜತೆಯನ್ನು ಎಂದೂ ಬಿಡುತ್ತಿದ್ದಿಲ್ಲ. ಅವರಿಬ್ಬರ ಪ್ರೇಮವೇ ಹಾಗಿತ್ತು. ಅದಕ್ಕೆ ಅದು ಒಡಹುಟ್ಟಿದ ತಮ್ಮನೆಂದು ಎಲ್ಲರೂ ಅನ್ನುತ್ತಿದ್ದರು.

**ಪ್ರಶ್ನೆ : ೨** ರಂಗಣ್ಣನು ನಗರವನ್ನು ಬಿಟ್ಟು ಹಳ್ಳಿಗೆ ಏಕೆ ಹೊರಡಬೇಕಾಯಿತು ?

**ಉತ್ತರ :** ರಂಗಣ್ಣನು ಕೆಲಸಮಾಡುತ್ತಿದ್ದ ಖಾತೆಯೊಳಗಿನ ಕೆಲ ಜನರನ್ನು ಕೆಲಸದಿಂದ ಕಡಿಮೆ ಮಾಡಿದ್ದರು. ರಂಗಣ್ಣನೂ ಅವರಲ್ಲಿ ಒಬ್ಬ. ಕೆಲಸ ಹೋಗಿದುದರಿಂದ ರಂಗಣ್ಣನು ನಗರವನ್ನು ಬಿಟ್ಟು ಹಳ್ಳಿಗೆ ಹೊರಡಬೇಕಾಯಿತು.

**ಪ್ರಶ್ನೆ : ೩** ಹಳ್ಳಿಗೆ ಹೋದಮೇಲೆ ಏನೇನು ಮಾಡಬೇಕೆಂದು ವಸಂತನು ಲೆಕ್ಕ ಹಾಕಿದನು ?

**ಉತ್ತರ :** ಹಳ್ಳಿಯ ಸುತ್ತಲೂ ಹೊಲ-ಗುಡ್ಡಗಳು. ಅಲ್ಲಿ ಹಕ್ಕಿಪಕ್ಕಿಗಳು. ಗುಡ್ಡದಲ್ಲಿ ನೊಲ-ನಾಯಿ-ಕಿರುಬುಗಳು ಇದ್ದವು. ಹಳ್ಳಿಗೆ ಹೋದಮೇಲೆ ಮುದ್ದುನ ಕರೆದುಕೊಂಡು ಬೇಟೆಯಾಡಲು ಹೋಗಬೇಕೆಂದು ವಸಂತನು ಲೆಕ್ಕಹಾಕಿದನು. ಹರಿಯುವ ಹೊಳೆಯಲ್ಲಿ ಈಜಾಟ ಜಿಗಿದಾಟ ಮಾಡಬೇಕೆಂದು ಲೆಕ್ಕಹಾಕಿದ್ದನು.

**ಪ್ರಶ್ನೆ : ೪** ಮುದ್ದು ವಸಂತನ ಪ್ರೀತಿಯು ಹೇಗ ಇತ್ತು ?

**ಉತ್ತರ :** ಮುದ್ದು ನಾಯಿಯಾಗಿದ್ದರೂ ತನ್ನ ಜೀವನದಲ್ಲಿ ಜತೆಗಾರ ಎಂದು ವಸಂತ ತಿಳಿದಿದ್ದನು. ನಾಯಿ ಮರಿಯು ವಸಂತನನ್ನು ಒಡನಾಡಿಯೆಂದು ತಿಳಿದಿತ್ತು. ತಾ ಬೇರೆ—ಅದು ಬೇರೆ ಎಂದು ತಿಳಿಯದ ಹಾಗೆ ಅವರಿಬ್ಬರ ಪ್ರೇಮ ಇದ್ದಿತು.

**ಅಭ್ಯಾಸ :** (೧) ನೀವು ಬರೆಯಿರಿ. ಈ ಪಾಠದಲ್ಲಿಯ ವಿಷಯಗಳನ್ನು ಲಕ್ಷದಲ್ಲಿಟ್ಟು ಬರೆಯಿರಿ.

(೨) ೧ ಹಳ್ಳದ ನೀರು **ಜುಳುಜುಳು** ಹರಿಯುತ್ತಿತ್ತು. (೨) ನೀರಡಿಸಿದವನು ನೀರನ್ನು **ಗಟಗಟ** ಕುಡಿಯುವನು. (೩) ಎಸರು **ಕತಕತ** ಕುದಿಯುತ್ತಿತ್ತು. (೪) ಪಾತ್ರೆಗಳನ್ನು **ಗಸಗಸ** ತಿಕ್ಕು. (೫) ಕೂಸು **ಕುಲುಕುಲು** ನಗುವುದು.

**ವ್ಯಾಕರಣ :** (೩) ಪುರುಷಾರ್ಥಕ : ೧ ಅವನ, ಅವನನ್ನು ೨ ಅವಳನ್ನು. ಆತನು, ೪ ಅದನ್ನು ೫ ನಾವು ೬ ನಿನ್ನ. ೭ ನನ್ನ ೮ ಅವರು ೯ ಅವನನ್ನು

**ಆತ್ಮಾರ್ಥಕ :** ೩ ತನ್ನ ೪ ತನ್ನ.

(೪) ಇದನ್ನು ನೀವೇ ಗುರುತಿಸಿರಿ.

**ಪ್ರಶ್ನೆ—ಉತ್ತರ ೧೦ ನೆಯ ಪಾಠ**

**ಪ್ರಶ್ನೆ : ೧** ರಂಗಣ್ಣನು ವಸಂತನ ಮೇಲೆ ಏಕೆ ಸಿಟ್ಟಾದನು ?

**ಉತ್ತರ :** ಕಟ್ಟುವ ಸಾಮಾನುಗಳಲ್ಲಿ ಮುದ್ದನ ಗೋಣೀಚೀಲ ತರಲೇನು ಎಂದು ವಸಂತನು ಅಂದನು. ಮನೆಯ ಜನರೇ ಉಪವಾಸ ಬೀಳುವ ಪ್ರಸಂಗವು ನೌಕರಿ ಹೋದುದರಿಂದ ಉಂಟಾಗಿರುವಾಗ ನಾಯಿಯನ್ನು ಕಟ್ಟಿಕೊಂಡೇನು ಮಾಡುವುದು ಎಂದು ರಂಗಣ್ಣನು ವಸಂತನ ಮೇಲೆ ಸಿಟ್ಟಿಗೆದ್ದನು.

**ಪ್ರಶ್ನೆ : ೨** ವಸಂತನು ಹಿಡಿದ ಹಟವಾವುದು ?

**ಉತ್ತರ :** ತಂದೆತಾಯಿ ಇಬ್ಬರೂ ಏನೇನೋ ಹೇಳಿ ಮುದ್ದನನ್ನು ಒಯ್ಯುವಂತಿಲ್ಲವೆಂದು ಹೇಳಿದರು. ಮುದ್ದನನ್ನು ಬಿಟ್ಟು ನಾವು ಎಂದೂ ಬರುವುದಿಲ್ಲ ಎಂದು ವಸಂತನು ಹಟ ಹಿಡಿದನು.

**ಪ್ರಶ್ನೆ : ೩** ಸ್ಟೇಶನದಲ್ಲಿ ಮುದ್ದು ತನ್ನ ಪ್ರೀತಿಯನ್ನು ಹೇಗೆ ತೋರಿತು ?

**ಉತ್ತರ :** ತಾನೂ ಗಾಡಿಯ ಒಳಕ್ಕೆ ಹೋಗಬೇಕೆಂದು ಮುದ್ದು ಪ್ರಯತ್ನಿಸಿತು. ತನ್ನೆದೆಯ ದುಃಖವೆಲ್ಲ ಕಿತ್ತುಬರುವಂತೆ ಬೊಗಳತೊಡಗಿತು. ಗಾಡಿಬಿಟ್ಟಿತು. ನಾಯಿ ಅದರ ಗುಂಟ ಓಡಿತು. ಗಾಡಿ ದೂರ ಹೋಯಿತು. ನಾಲಗೆಯನ್ನು ತೆಗೆದು ತೇಲುಗಣ್ಣು ಹಾಕಿ ಎಷ್ಟೋಹೊತ್ತು ಅಲ್ಲಿಯೇ ಬಿದ್ದುಕೊಂಡಿತು. ಹಾಗೆಲ್ಲ ಮಾಡಿ ತನ್ನ ಒಡನಾಡಿಯನ್ನು ಕಳೆದುಕೊಂಡ ದುಃಖ ತೋರಿ ಮುದ್ದು ತನ್ನ ಪ್ರೀತಿಯನ್ನು ತೋರಿತು.

**ಪ್ರಶ್ನೆ:** ೪ ವಸಂತನನ್ನು ಅವನ ತಾಯಿ ತಂದೆ ಯಾವ ರೀತಿಯಿಂದ ಸಮಾಧಾನ ಮಾಡಿರಬಹದು.।

ಉತ್ತರ: ಮತ್ತೆ ಬೇಗ ನೌಕರಿಹತ್ತುವುದು. ಆಗ ತಿರುಗಿ ಈ ಊರಿಗೆ ಬರೋಣ. ಆ ನಾಯಿಯನ್ನೇ ನಿನಗೆ ತಂದು ಕೊಡುತ್ತೇವೆ. ಸ್ವಲ್ಪದಿನದ ಮಾತು. ಅಳಬೇಡ. ಬೇಕಾದರೆ ಹಳ್ಳಿಯಲ್ಲಿಯೂ ಒಂದು ಬೇರೆ ಇದಕ್ಕೂ ಚೆನ್ನಾದ ನಾಯಿ ತರೋಣ, ಎಂದು ಮುಂತಾಗಿ ಹೇಳಿ ಸಮಾಧಾನ ಮಾಡಿರಬಹುದು.

**ಪ್ರಶ್ನೆ :** ೫ ಮುದ್ದುವಿಗಾಗಿ ಕಮಲಮ್ಮ ಮಿಡುಕಿದಳೇಕೆ ?

**ಉತ್ತರ:** ತಾವು ಊರುಬಿಟ್ಟು ಹೋಗುವುದು ನಿಶ್ಚಿತವಾದ ಮೇಲೆ ಅದನ್ನು ಸಾಕಲು ಬೇರೆಯಾರಿಗಾದರೂ ಕೊಟ್ಟುಬಂದಿದ್ದರೆ ಆಗುತ್ತಿತ್ತು. ಅದು ಒಂದೇ ಆಯಿತಲ್ಲ ಎಂದು ಮಿಡಕಿದಳು.

**ಅಭ್ಯಾಸ :** (೧) ವಿರುದ್ಧ ಶಬ್ದಗಳು : ಸಫಲ—ವಿಫಲ; ದುಃಖ—ಸುಖ. ಹಿತ—ಅಹಿತ; ಗೆಳೆಯ—ಶತ್ರು.

(೨) ವಸಂತನೇ ದಿನಾಲು ರೊಟ್ಟೆ ಹಾಕುತ್ತಿದ್ದ. ಅದರೊಡನೆ ಆಟವಾಡುತ್ತಿದ್ದ; ಸಣ್ಣಮರಿ ನಾಯಿ. ಬೇರೆ ಯಾರೊಡನೆ ಆಡಿ ಉಂಡು ರೂಢಿಯಿಲ್ಲ. ಅದಕ್ಕೆ ಅದು ನೊಂದುಕೊಂಡು ಒಂದೆರಡು ದಿನ ಸುಮ್ಮನೆ ಬಿದ್ದುಕೊಂಡಿತು. ಹಸಿವು ಕೇಳುವುದೇ ? ಅತ್ತಿತ್ತ ಅಡ್ಡಾಡಿ ತಿಂದರೂ ಬಾಯಿಗೆ ರುಚಿಯಿಲ್ಲದಾಯಿತು. ದಿನಕಳೆದಂತೆ ಸಾವಕಾಶವಾಗಿ ಮರೆತು ತನ್ನ ಜೀವನ ಸಾಗಿಸತೊಡಗಿತು.

**ವ್ಯಾಕರಣ :** (೩) ಸಂಬಂಧಾರ್ಥಕ : ೧ ಯಾವನು.

ಪ್ರಶ್ನಾರ್ಥಕ : ೨ ಯಾರು. ೩ ಯಾರು ?

ಸಾಮಾನ್ಯರ್ಥಕ: ೪ ಒಂದಾನೊಂದು ೫ ಒಬ್ಬಾನೊಬ್ಬ ೬ ಏನೊಂದು



# ೧೧ ರೇಶಿಮೆಯ ಉದ್ಯೋಗ

### ಈ ಪಾಠದ ವಿಷಯವು ಯಾವುದು ?

ರೇಶಿಮೆಯ ಉದ್ಯೋಗ ಎಂದಿನಿಂದ ಪ್ರಾರಂಭವಾಯಿತು ? ಯಾವ ದೇಶದಲ್ಲಿ ಮೊದಲಾಯಿತು ? ರೇಶಿಮೆಯ ಹುಳವನ್ನು ಸಾಕುವ ಬಗೆ ಹೇಗೆ ? ರೇಶಿಮೆ ಹೇಗೆ ತೆಗೆದರು ? ಕೃತ್ರಿಮ ರೇಶಿಮೆ ಹೇಗೆ ತಯಾರಾಗುತ್ತದೆ, ಮುಂತಾಗಿ ಹೇಳಿದೆ.

### ಈ ಪಾಠದ ಸಾರಾಂಶ

ರೇಶಿಮೆಯ ಉಡುಗೆಯು ಬಹುದಿನಗಳಿಂದ ಖ್ಯಾತಿಪಡೆದಿದೆ. ಚೀನ, ಜಪಾನ ಇಂಡೋಚೀನ, ಇಟಲಿ, ಫ್ರಾನ್ಸ, ಸ್ಪೇನ, ತುರ್ಕಸ್ಥಾನ, ಹಿಂದುಸ್ತಾನ, ಬ್ರಹ್ಮದೇಶ

ಗಳಲ್ಲಿ ಅತಿ ಪ್ರಾಚೀನಕಾಲದಿಂದಲೂ ರೇಶಿಮೆಯ ಉದ್ಯೋಗ ಪ್ರಚಾರದಲ್ಲಿತ್ತು. ಇಂಗ್ಲಂಡ, ಅಮೇರಿಕೆಗಳ ಕಚ್ಚಾಮಾಲು ತರಿಸಿಕೊಂಡು ಪಕ್ಕಾಮಾಲು ಸಿದ್ಧಮಾಡು ತ್ತವೆ. ನಮ್ಮ ದೇಶವು ರೇಶಿಮೆಯ ಉದ್ಯೋಗಕ್ಕೆ ಹೆಸರಾಗಿದೆ. ರೇಶಿಮೆಯು ಒಂದು ಜಾತಿಯ ಹುಳದಿಂದ ನಿರ್ಮಾಣವಾಗುತ್ತದೆ. ಅವುಗಳಿಗೆ ರೇಶಿಮೆಯ ಹುಳಗ ಳೆಂದೇ ಕರೆವರು ರೇಶಿಮೆಯ ಬಣ್ಣ ಕೆನೆಬಣ್ಣ. ಈ ಹುಳಗಳು ಕೋರಿಗಿಡದ ಎಲೆ ಗಳನ್ನು ತಿಂದು ಬದುಕುತ್ತವೆ. ಕೆಲವು ಔಡಲ ಎಲೆಯನ್ನೂ ತಿನ್ನುತ್ತವೆ. ರೇಶಿಮೆಯ ಹುಳವು ಕೀಟಕವಾಗಿರುವುದರಿಂದ ಅದಕ್ಕೆ ಬೇರೆ ಬೇರೆ ಜೀವನದ ಅವಸ್ಥೆಗಳು ಇವೆ. ದೊಡ್ಡದಾಗಿ ಪತಂಗವಾದಾಗ ತತ್ತಿ ಇಡುತ್ತವೆ. ಈ ತತ್ತಿಯಿಂದ ಕೀಡಿ ಬರುತ್ತವೆ. ಈ ಕೀಡಿಯ ಅವಸ್ಥೆಯಲ್ಲಿ ಮಾತ್ರ ಹುಳುವು ಆಹಾರ ತಿನ್ನುತ್ತದೆ. ದೊಡ್ಡದಾದಂತೆ ತಿನ್ನುವುದು ಕಡಿಮೆಯಾಗುತ್ತದೆ. ನಡುನಡುವೆ ಉಪವಾಸ ವಿಶ್ರಾಂತಿಗಳು. ಆಗ ಅದು ಪರಿಬಿಡುವುದು. ಒಟ್ಟು ನಾಲ್ಕು ಸಲ ಪರಿಬಿಡುವುದು. ಆಗ ರೇಶಿಮೆ ಕೋಶ ತಯಾರಾಗುವುದು. ಕೀಟಕವು ಹೊರಗೆ ಬಂದರೆ ರೇಶಿಮೆ ಎಳೆ ತುಂಡಾಗುವುದು. ಅದಕ್ಕೆ ಅದು ಇನ್ನು ಕೋಶದಲ್ಲಿರುವಾಗಲೇ ಕೊಂದು ಎಳೆ ತೆಗೆಯಬೇಕಾಗುವುದು. ತತ್ತಿಹಾಕಿದಂದಿನಿಂದ ಕೋಶ ಸಿದ್ಧವಾಗಬೇಕಾದರೆ ಒಂದು ತಿಂಗಳು ಹಿಡಿವುದು. ಕೋಶಸಿದ್ಧವಾದ ಮೇಲೆ ಅವನ್ನು ಕುದಿಸುವರು. ಎಳೆಗಳು ಬೇರೆಯಾಗುವುವು. ಇಡಿ ಕೋಶವು ಒಂದೇ ಎಳೆಯಾಗುತ್ತದೆ. ಇದನ್ನು ಚಕ್ರಕ್ಕೆ ಸುತ್ತುವರು. ರೇಶಿಮೆ ಉದ್ಯೋಗದಲ್ಲಿ ೧೦ ಭಾಗಗಳು. ಇವನ್ನು ಒಂದೆಡೆಯಲ್ಲಿ ಮಾಡಬಹುದು; ಹಂಚಿ ಕೆಲಸ ಮಾಡಬಹುದು. ಕೀಡಿಗಳನ್ನು ಸಾಕಲಿಕ್ಕೆ ಬಿದುರಿನ ತಟ್ಟೆಗಳು ಬೇಕು. ಇಡಲು ಖಾನೆಗಳುಳ್ಳ ಹಂದರಬೇಕು. ರೇಶಿಮೆಯ ಉಪಯುಕ್ತತೆ ಎಷ್ಟು ಹೇಳಿದರೂ ಕಡಿಮೆಯೆ. ರೇಶಿಮೆಗಿರುವ ಬೇಡಿಕೆಯ ಮೂಲಕ ಕೃತ್ರಿಮ ರೇಶಿಮೆಯ ನಿರ್ಮಾ ಣವೂ ನಡೆದಿದೆ. ಕೃತ್ರಿಮ ರೇಶಿಮೆಗೆ ಸ್ವಾಭಾವಿಕ ರೇಶಿಮೆಯ ಸೊಬಗು ಬರಲಾ ರದು. ರೇಶಿಮೆಯು ಉಡುಗೆ ಆರೋಗ್ಯವರ್ಧಕವಾಗಿದೆ.

**ಕಠಿಣ ಶಬ್ದಗಳ ಅರ್ಥ**

ಕೋಶಸ್ಥ—ಕೋಶದಲ್ಲಿದ್ದ. ನಿರಾಯಾಸ—ಆಯಾಸವಿಲ್ಲದೆ. ವಿದ್ಯುತ್ ವಾಹಕದ ಆವರಣ—ತಂತಿಯ ಮೇಲಿನ ಮುಸುಕು.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಪ್ರಾಚೀನಕಾಲದಿಂದಲೂ ರೇಶಿಮೆಯ ಉದ್ಯೋಗವು ಯಾವ ದೇಶಗಳಲ್ಲಿ ಪ್ರಚಾರದಲ್ಲಿರುವುದು ?

ಉತ್ತರ : ಚೀನ, ಜಪಾನ, ಇಂಡೋಚೀನ, ಇಟಲಿ, ಫ್ರಾನ್ಸ, ಸ್ಪೇನ, ತುರ್ಕಸ್ತಾನ ಹಿಂದುಸ್ತಾನ ಬ್ರಹ್ಮದೇಶಗಳಲ್ಲಿ ಪ್ರಾಚೀನಕಾಲದಿಂದಲೂ ರೇಶಿಮೆಯ ಉದ್ಯೋಗವು ಪ್ರಚಾರದಲ್ಲಿತ್ತು.

**ಪ್ರಶ್ನೆ : ೨** ರೇಶಿಮೆ ಹುಳಗಳ ಆಹಾರವಾವುದು ?

**ಉತ್ತರ :** ರೇಶಿಮೆಯ ಹುಳದ ಆಹಾರವು ಕೋರಿ ಎಲೆ, ಕೆಲ ಹುಳಗಳು ಔಡಲ ಎಲೆಯನ್ನು ತಿನ್ನುತ್ತವೆ.

**ಪ್ರಶ್ನೆ: ೩** ರೇಶಿಮೆ ಹುಳವು ತನ್ನ ಕೋಶವನ್ನು ಹೇಗೆ ನಿರ್ಮಿಸಿಕೊಳ್ಳುತ್ತದೆ?

**ಉತ್ತರ :** ಕೀಡಿಯ ಅವಸ್ಥೆಯಲ್ಲಿದ್ದಾಗ ಆಹಾರ ಹೆಚ್ಚು ತಿನ್ನುವುದು. ದೊಡ್ಡದಾದ ಹಾಗೆ ಕಡಿಮೆಯಾಗುವುದಾದರೂ ಆಹಾರ ತೆಗೆದುಕೊಳ್ಳುವುದು. ತಿನ್ನುವುದು ವಿಶ್ರಾಂತಿ ಪಡೆಯುವುದು. ಈ ವಿಶ್ರಾಂತಿಯ ಅವಸ್ಥೆಯಲ್ಲಿ ಅದರ ಎಳೆ ಸಿದ್ಧವಾಗಿ ಕೋಶವಾಗುವುದು.

**ಪ್ರಶ್ನೆ : ೪** ಕೋಶಗಳಲ್ಲಿಂದ ರೇಶಿಮೆಯನ್ನು ಹೇಗೆ ತೆಗೆಯುವರು ?

**ಉತ್ತರ :** ಒಳ್ಳೆ ರೀತಿಯಲ್ಲಿ ಬೆಳೆದ ಮತ್ತು ಕೀಟಕವು ಇನ್ನೂ ಹೊರಬರದೇ ಇದ್ದಾಗ ಆ ಕೋಶಗಳನ್ನು ಕುದಿಸುವರು. ಕುದಿಸಿದ ನಂತರ ಕೋಶದಲ್ಲಿಯ ಜಿಗುಟು ವಸ್ತುವು ಹೋಗುವುದು. ಎಳೆಗಳು ಬಿಡಿಬಿಡಿಯಾಗುವುವು. ಆಗ ಎಳೆಯನ್ನು ಬೇರೆ ಚಕ್ರಕ್ಕೆ ಸುತ್ತಿ ರೇಶಿಮೆ ತೆಗೆವರು.

**ಪ್ರಶ್ನೆ : ೫** ರೇಶಿಮೆಯ ಉದ್ಯೋಗವನ್ನು ಎಷ್ಟು ವಿಧವಾಗಿ ಜನರು ಕೈಕೊಳ್ಳುವರು ?

**ಉತ್ತರ :** ಇಡಿ ಉದ್ಯಮವನ್ನು ಹತ್ತು ಭಾಗವಾಗಿ ಮಾಡಬಹುದು. ಒಂದೊಂದು ಭಾಗವನ್ನು ಒಬ್ಬೊಬ್ಬರು ಇಲ್ಲವೆ ಎರಡು ಮೂರು ಕೂಡಿ, ಇಲ್ಲವೆ ಎಲ್ಲವನ್ನು ಒಬ್ಬನೆ ಮಾಡಬಹುದು. ಕೋರಿಗಿಡ ಸಾಗುವಳಿ, ತತ್ತಿಗಳ ನಿರ್ಮಾಣ, ಕೀಡಿ ಸಾಕುವಿಕೆ, ಕೋಶಗಳ ಸಿದ್ಧತೆ, ಕೋಶಗಳನ್ನು ಹದಗೊಳಿಸುವಿಕೆ, ಎಳೆ ಸುತ್ತುವಿಕೆ, ನೇಯುವಿಕೆ, ಬಣ್ಣಹಾಕುವಿಕೆ, ಅಚ್ಚು ಹಾಕುವಿಕೆ, ಕಸೂತಿ ಹಾಕುವಿಕೆ ಇವೇ ಹತ್ತು ವಿಧಗಳು.

**ಪ್ರಶ್ನೆ : ೬** ಒಕ್ಕಲಿಗರು ರೇಶಿಮೆಯ ಉದ್ಯೋಗಕ್ಕೆ ಹೇಗೆ ನೆರವಾಗಬಲ್ಲರು?

**ಉತ್ತರ :** ಕೋರಿ ಗಿಡಗಳ ಸಾಗುವಳಿಯನ್ನು ನಿರಾಯಾಸವಾಗಿ ಒಕ್ಕಲಿಗರು ಮಾಡಬಹುದು. ಒಕ್ಕಲತನದ ಕೆಲಸದಲ್ಲಿ ಬಿಡುವು ದೊರೆತಾಗೆಲ್ಲ ಕೀಡಿಸಾಕುವುದು, ಕೊಶಸಿದ್ಧಪಡಿಸುವುದೂ ಮಾಡಬಹುದು. ಮನೆಯಲ್ಲಿ ಹೆಂಗಸರೂ ಹುಡುಗರೂ ನೆರವಾಗಬಹುದು. ಹೀಗೆ ಒಕ್ಕಲಿಗರು ರೇಶಿಮೆಯ ಉದ್ಯೋಗಕ್ಕೆನೆರವಾಗಬಲ್ಲರು.

**ಪ್ರಶ್ನೆ :೭** ಕೃತ್ರಿಮ ರೇಶಿಮೆಯನ್ನು ಯಾವ ವಸ್ತುಗಳಿಂದ ತಯಾರಿಸುವರು?

**ಉತ್ತರ :** ಕಟ್ಟಿಗೆ, ಹಾಲು, ಕಲ್ಲಿದ್ದಲಿ ಇವುಗಳಲ್ಲಿಯ ಕೆಲವೊಂದು ವಸ್ತುಗಳ ನೆರವಿನಿಂದ ಕೃತ್ರಿಮ ರೇಶಿಮೆ ಸಿದ್ಧಪಡಿಸುವರು.

**ಪ್ರಶ್ನೆ ೮** ರೇಶಿಮೆಯ ಉಡುಗೆ ಅರಸು ಉಡಿಗೆಯೇಕೆ ?

**ಉತ್ತರ :** ರೇಶಿಮೆಯ ನಯ ನಾಜೂಕು ಕಾಂತಿ, ಬೆಲೆಗಳನ್ನು ನೋಡಿದರೆ ಅದು ಸಿರಿವಂತರ-ಅರಸರ ಉಡುಗೆ. ಅಲ್ಲದೆ ಅದರಲ್ಲಿಯ ಗುಣಗಳನ್ನು ನೋಡಿದರೆ

ಮನಸ್ಸಿಗೆ ಅದು ಬಲು ಸೊಗಸು ತರುವುದು. ವಿದ್ಯುತ್ ನಿರ್ಮಾಣವಾಗುವುದರಿಂದ ಆರೋಗ್ಯವರ್ಧಕವಿರುವುದು. ಈ ದೃಷ್ಟಿಯಿಂದಲೂ ಅದು ಅರಸು ಉಡಿಗೆ.

**ಪತ್ರವ್ಯವಹಾರ :** ಸಂಚಾಲಕರು, ನೂತನ ಪುಸ್ತಕ ಭಾಂಡಾರ ಕೊಪ್ಪೀಕರ ರೋಡ ಹುಬ್ಬಳ್ಳಿ ಇವರಿಗೆ —

ವಂದನೆಗಳು. ನಾವು ನಮ್ಮ ವರ್ಗದಿಲ್ಲಿ ಒಂದು ಸಹಕಾರಿ ಯೋಜನೆಯನ್ನು ಮಾಡಿಕೊಳ್ಳಬೇಕೆಂದಿದ್ದೇವೆ. ನಮಗೆ ನಮ್ಮ ವರ್ಗಕ್ಕೆ ಹತ್ತುವ ಒಂದೊಂದು ಪುಸ್ತಕದ ೨೫ ಪ್ರತಿಗಳು ಬೇಕು. ಈ ಪುಸ್ತಕ ತರಿಸುವುದರಿಂದ ನಮಗೆ ಬರುವ ಕಮಿಶನ್ನಿನಲ್ಲಿ ಉತ್ತಮ ಕತೆಕಾದಂಬರಿಗಳನ್ನು ಸೇರಿಸಿ ಒಟ್ಟುಹಣಕ್ಕೆ ವ್ಹಿ.ಪಿ. ಮಾಡಿರಿ. ವಿಳಾಸ ಹೀಗಿದೆ. ಗೋವಿಂದ ಕುಲಕರ್ಣಿ. ೬ ನೆಯ ವರ್ಗ, ಮಾಧ್ಯಮಿಕ ಶಾಲೆ, ಹಾವೇರಿ.

ತಮ್ಮ ನಂಬುಗೆಯ
ಗೋವಿಂದ ಕುಲಕರ್ಣಿ.

~~~~~~~

## ೧೨ ಶ್ರಾವಣಮಾಸ

**ಈ ಪಾಠದ ವಿಷಯವು ಯಾವುದು ?**

ಶ್ರಾವಣ ಮಾಸವು ಯಾವ ಕಾಲದಲ್ಲಿ ಬರುವುದು ? ಆಗ ಯಾವ ಕಾರ್ಯಕ್ರಮಗಳನ್ನು ನಡೆಸುವರು ? ಶ್ರಾವಣ ಎಂಬ ಹೆಸರು ಏಕೆ ಬಂದಿದೆ ? ಮುಂತಾಗಿ ಹೇಳಿದೆ.

**ಈ ಪಾಠದ ಸಾರಾಂಶ**

ಶ್ರಾವಣಮಾಸದಲ್ಲಿ ಇನ್ನು ಮಳೆ ಇರುವುದು. ಹೊಲದಲ್ಲಿಯೂ ಅಷ್ಟು ಕೆಲಸವೂ ಇರುವುದಿಲ್ಲ. ಬಿಡುವು ಇರುವುದರಿಂದ ಪುರಾಣ–ಪ್ರವಚನ ಕೇಳಬೇಕೆಂಬ ಆತುರವೂ ಇರುವುದು. ಹೀಗೆ ಶ್ರವಣ ಕಾರ್ಯ ಈ ತಿಂಗಳಲ್ಲಿ ನಡೆವುದೆಂದು ಇದು ಶ್ರಾವಣ ಮಾಸ. ಈ ತಿಂಗಳಲ್ಲಿ ಹಬ್ಬಗಳೂ ಹೆಚ್ಚು. ಶ್ರಾವಣದ ಧಾರ್ಮಿಕ ಕಾರ್ಯಗಳಿಗೆಲ್ಲ ಸಿರಿಯಾಳ ಸೆಟ್ಟಿಯು ಪ್ರವರ್ತಕನೆಂದು ಹೇಳುತ್ತಾರೆ. ಪ್ರತಿಪದೆಯ ದಿವಸ ಪುರಾಣವನ್ನು ಗದ್ದಿಗಿಗೊಳಿಸಲಾಗುತ್ತದೆ. ಪುರಾಣ ಶ್ರವಣ ಮಾಡಲು ಬಂದವರಿಗೆ ಪ್ರಸಾದ ದೊರೆವುದು. ಪುರಾಣಿಕರನ್ನು ಪುರಾಣ ಗ್ರಂಥವನ್ನು ಕರೆದೊಯ್ದು ಪೂಜೆ ಪ್ರಸ್ತ ಮಾಡಿಸುವರು. ಇದಕ್ಕೆ ಖಾಂಡ ಮಾಡಿಸುವುದು ಎನ್ನುತ್ತಾರೆ. ಚಿಕ್ಕ ಪ್ರಸ್ತ ಮಾಡಿಸಿದರೆ ಅದಕ್ಕೆ ಗತಿ ಮಾಡಿಸುವುದು ಎನ್ನುತ್ತಾರೆ. ಇಡಿಯ ತಿಂಗಳಲ್ಲಿ ಈ ಕಾರ್ಯಕ್ರಮಗಳು ನಡೆವುವು. ಒಮ್ಮೆ ಹೆಡಿಗೆ ಜಾತ್ರೆ ನೆರೆಯಿಸಬೇಕೆಂದು ನಿರ್ಣಯವಾಯಿತು. ಮನೆಮನೆಗೂ ಸಿದ್ಧತೆ ನಡೆಯಿತು. ಆಹಾರ ಸಾಹಿತ್ಯವನ್ನೆಲ್ಲ ಹೆಡಿಗೆಯಲ್ಲಿ ಅಚ್ಚುಕಟ್ಟಾಗಿ ಇರಿಸಿಕೊಂಡು ವಸ್ತ್ರಾಲಂಕಾರಗಳಿಂದ ಸಿಂಗರಿಸಿಕೊಂಡು ಮೆರವಣಿಗೆಯಲ್ಲಿ ಬರುವರು. ವಾದ್ಯವಾದನಗಳ ಪ್ರತಿಧ್ವನಿ. ಈ ಮೆರ
~~~~~~~

ವಣಿಗೆಯು ಕಣ್ಣು ಕಿವಿಗೆ ರಸದೂಟ. ಊರ ಹೊರಗಿನ ದೇವಾಲಯದಲ್ಲಿ ಮಂಟಪ ಸಿದ್ಧವಾಗಿರುವುದು. ದೇವರ ಪೂಜೆ ನೈವೇದ್ಯಗಳಾದ ಮೇಲೆ, ಊಟ. ಊಟವಾದ ಮೇಲೆ ಹರದೇಶಿ—ನಾಗೇಶಿ ಹಾಡು. ಪುರಾಣ ಮುಗಿತಾಯ ದಿವಸವಂತೂ ಇದಕ್ಕೂ ಮಿಗಿಲಾದ ಉತ್ಸವ. ಹಳ್ಳಿಗರು ಬಾರೋ ಶ್ರಾವಣಾ ಎಂದು ಕರೆಯದಿರಲಾರರು.

**ಕಠಿಣ ಶಬ್ದಗಳ ಅರ್ಥ**

ಅಮಾಸಿ—ಅಮಾವಾಸ್ಯೆ. ಗದ್ದಿಗೆಗೊಳಿಸು—ಪೂಜೆಮಾಡು ಶ್ರವಣ—ಕೇಳು. ತಂಗುಸ್ಥಳ— ಇಳಿದುಕೊಳ್ಳುವಸ್ಥಳ. ಸೇರುವೆ—ಸಮ್ಮಿಲನ. ಹೆಡಿಗೆ—ತಲೆಯ ಮೇಲೆ ಇಟ್ಟುಕೊಂಡ ಸಾಮಗ್ರಿ ಬುಟ್ಟಿ. ಛತ್ತು ಹಾಕು—ಮಂಟಪಕಟ್ಟು. ಸುಮಂಗಲೆ—ಮುತ್ತೈದೆ. ಹಿಲ್ಲಾಲು—ಕೋಲಿಗೆ ಕಟ್ಟಿದ ದೀಪ. ನಾಲ್ಮಡಿ—ನಾಕುಪಟ್ಟು. ಹತ್ತುಮಡಿ—ಹತ್ತುಪಟ್ಟು.

**ಪ್ರಶ್ನೆ—ಉತ್ತರ**

**ಪ್ರಶ್ನೆ :** ೧ ಶ್ರಾವಣಮಾಸದಲ್ಲ ಜನರು ಧಾರ್ಮಿಕಕಾರ್ಯದಲ್ಲಿ ಹೇಗೆ ನಿರತರಾಗಿರುತ್ತಾರೆ ?

**ಉತ್ತರ :** ಶ್ರಾವಣಮಾಸದಲ್ಲಿ ಇನ್ನು ಮಳೆಇರುತ್ತದೆ. ಅದಕ್ಕೆ ಹೊರಗೆ ಹೋಗಲು ಮನಸ್ಸು ಬಾರದು. ಹೊಲಲ್ಲಿಯೂ ಕೆಲಸಕಡಿಮೆ. ಹೀಗಾಗಿ ಪುರಾಣ ಪ್ರವಚನ ಕೇಳುವುದರಲ್ಲಿ ಈ ತಿಂಗಳುಕಳೆಯಲು ಆಗುವುದು. ಈ ತಿಂಗಳಲ್ಲಿ ಹಬ್ಬಗಳೂ ಬಹಳ. ಅವಕ್ಕೆ ಜನರು ಧಾರ್ಮಿಕ ವ್ರತಾಚರಣೆಗಳಲ್ಲಿ ಕಾಲಕಳೆಯುತ್ತಾರೆ.

**ಪ್ರಶ್ನೆ :** ೨ ಆಧ್ಯಾಯ ಮುಗಿದಾಗ ಅನುಕೂಲವುಳ್ಳವರು ಪುರಾಣಿಕರನ್ನು ಸತ್ಕರಿಸುವ ರೀತಿಯಾವುದು ?

**ಉತ್ತರ :** ಅಧ್ಯಾಯ ಮುಗಿದಾಗ ಅನುಕೂಲವುಳ್ಳವರು ಪುರಾಣ ಗ್ರಂಥವನ್ನು ಪುರಾಣಿಕರನ್ನು ತಮ್ಮಮನೆಗೆ ಕರೆದೊಯ್ದು ಪೂಜೆ ಪ್ರಸ್ತಗಳನ್ನು ಸಲ್ಲಿಸುವರು. ಇದಕ್ಕೆ ಖಾಂಡಮಾಡಿಸುವುದು ಎನ್ನುತ್ತಾರೆ.

**ಪ್ರಶ್ನೆ :** ೩ ಗತಿ ಮಾಡಿಸುವುದು ಎಂದರೇನು ?

**ಉತ್ತರ :** ಅನುಕೂಲ ಕಡಿಮೆಯಿದ್ದವರು ಬಿನ್ನಹಮಾಡಿ ಚಿಕ್ಕ-ಪ್ರಸ್ತ ಮಾಡಿಸುವರು ಇದಕ್ಕೆ ಗತಿಮಾಡಿಸುವುದು ಎನ್ನುತ್ತಾರೆ.

**ಪ್ರಶ್ನೆ :** ೪ ಶ್ರಾವಣಮಾಸವು ಜನರಿಗೆ ಅಚ್ಚುಮೆಚ್ಚಿನ ತಿಂಗಳವೇಕೆ ?

**ಉತ್ತರ** ಶ್ರಾವಣಮಾಸವು, ವ್ರತ, ಉಪವಾಸ, ಸವಿಯೂಟ, ಪುರಾಣ ಪ್ರವಚನ, ವಾದ್ಯವಾದನ, ಹಾಡು-ಡೊಳ್ಳು ಇವುಗಳಿಗೆ ಸುಗ್ಗಿ. ಹೊಲದಲ್ಲಿ ಕೆಲಸವಿರುವದಿಲ್ಲ; ಮಳೆಯಿರುವುದರಿಂದ ಮನೆಯೊಳಗೆ-ಗುಡಿಯೊಳಗೆ ಬೆಚ್ಚಗೆ ಕೂತು ಪುರಾಣಕತೆಗಳನ್ನು ಕೇಳಿ ಸಂತಸಬಡುವ ಕಾಲ. ಅದಕ್ಕೆ ಜನರಿಗೆ ಅದು ಅಚ್ಚುಮೆಚ್ಚಿನ ತಿಂಗಳಾಗಿದೆ.

**ಅಭ್ಯಾಸ:** ೧ ಹೆಡಿಗೆಯ ಜಾತ್ರೆಯ ವರ್ಣನೆಯನ್ನು ಬರೆಯಿರಿ.

ಗೊರವನನ್ನು ಕರೆಸಿ ಹೆಡಿಗೆಯ ಜಾತ್ರೆಯ ಡಂಗುರ ಸಾರಿಸುವುದು ಮೊದಲ ಕೆಲಸ. ಊರೆಲ್ಲ ಸುದ್ದಿ ಹಬ್ಬಿದ ಕೂಡಲೆ, ತಮಗೆ ಅನುಕೂಲವಿದ್ದಂತೆ ಜನರು ಸಜ್ಜೆ ರೊಟ್ಟಿ, ಹಿಂಡಿಪಲ್ಲೆ ಒಡೆ, ಚಟ್ನಿ ಉಸ್ಸಿನಕಾಯಿ ಹೋಳಿಗೆ ಕಡಬು ಮೊಸರು ಕಲಿಸಿದಅನ್ನ ಮುಂತಾಗಿ ಅಡುಗೆ ಮಾಡಿಕೊಂಡು ಹೆಡಿಗೆ ತುಂಬುವರು. ನಂತರ ಸಿಂಗಾರಾಗಿ ಹೆಡಿಗೆಗಳನ್ನು ತೆಗೆದುಕೊಂಡು ಚಾವಡಿಗೆ ಬರುವರು. ಅಲ್ಲಿಂದ ವಾದ್ಯಗಳ ಸಮೇತ ಮೆರವಣಿಗೆ ಹೊರಟು ಊರಹೊರಗಿನ ದೇವಾಲಯಕ್ಕೆ ತಲುಪುವರು. ಅಲ್ಲಿ ಪೂಜೆ ನೈವೇದ್ಯವಾಗಿ ಊಟಮಾಡುವುರು. ನಂತರ ಹರವೇತಿ-ನಾಗೇತಿ ಹಾಡುಗಳನ್ನು ಕೇಳಿ ಜಾತ್ರೆಮುಗಿಸಿಕೊಂಡು ಹೋಗುವರು.

೨ ಶ್ರಾವಣ ಮಾಸದಲ್ಲಿ ಬರುವ ಹಬ್ಬಗಳನ್ನು ಹೇಳಿರಿ.

ನಾಗ ಚವತಿ, ನಾಗಪಂಚಮಿ, ಸಿರಿಯಾಳ ಷಷ್ಠಿ, ಶ್ರಾವಣಸೋಮವಾರಗಳು ನೂಲು ಹುಣ್ಣಿವೆ, ಗೋಕುಲಾಷ್ಟಮಿ, ಸಂಪತ್ ಶುಕ್ರವಾರ ಇವು ಶ್ರಾವಣ ಮಾಸ ಮಾಸದಲ್ಲಿ ಬರುವ ಹಬ್ಬಗಳು.

**ವ್ಯಾಕರಣ:** ೩ (ಅ) ಕೆಳಗಿನ ನಾಮ ಸರ್ವ ನಾಮಗಳ ಲಿಂಗಗಳನ್ನು ಬರೆಯಿರಿ.

ಪುಲ್ಲಿಂಗ : ಹುಡುಗ, ರಾವಣ, ಅರಸ, ವಸಂತ, ಗಂಡ, ಅಣ್ಣ, ಅವನು, ಮಲ್ಲಯ್ಯ.

ಸ್ತ್ರೀಲಿಂಗ : ತಾಯಿ, ಅಕ್ಕ, ಚಲುವೆ, ಆಕೆ, ಕಸ್ತೂರಬಾ.

ನಪುಂಸಕಲಿಂಗ : ಆಕಳು, ಮರ, ಗಾಳಿ, ಹುಲಿ, ಭಾರತ, ಮಠ, ಆಕಾಶ, ಇದು, ಮಗು, ಕಲ್ಲು, ಮೇಜು, ಪಲ್ಲಕ್ಕಿ, ಮಳೆ, ಪುರಾಣ, ದೇವಸ್ಥಾನ, ವಾದ್ಯ, ಪಾಯಸ, ಜಾತ್ರೆ, ಉತ್ಸವ, ಶ್ರವಣ.

(ಆ) ಕೆಳಗಿನ ಶಬ್ದಗಳನ್ನು ವಚನ ಬದಲಿಸಿ ಬರೆಯಿರಿ.

ಗೆಳೆಯರು, ತಮ್ಮಂದಿರು, ಅಕ್ಕ, ಮಹಿಳೆ, ಸ್ವಾಮಿ, ಜಾಣ, ಸೊಸೆ, ಆಟಗಾರ, ಅದು, ಇವು, ಅವರು, ಇವರು, ಪ್ರಮುಖ, ಗುಡಿಗಳು, ಹಳ್ಳಿಗರು, ವ್ರತ, ಕಾರ್ಯಕ್ರಮಗಳು, ಪುಸ್ತಕಗಳು, ತಾಸುಗಳು, ಡೊಳ್ಳುಗಳು ಹೆಡಿಗೆಗಳು.

೪ ಕೆಳಗಿನ ವಾಕ್ಯಗಳಲ್ಲಿಯ ನಾಮಸರ್ವನಾಮಗಳ ಲಿಂಗವಚನಗಳನ್ನು ಹೇಳಿರಿ.

(೧) ಸಿರಿಯಾಳ ಸೆಟ್ಟಿಯು ಅಂಕಿತನಾಮ ಏಕವಚನ. ತಮಿಳುನಾಡು— ಅಂಕಿತನಾಮ ಏಕವಚನ. ಕರ್ನಾಟಕ,—ಅಂಕಿತನಾಮ ಏಕವಚನ. ಬಾದಾಮಿ, ಅಂಕಿತನಾಮ ಏಕವಚನ. ಮಹಾಕೂಟ—ಅಂಕಿತನಾಮ ಏಕವಚನ. ನಾಡು— ರೂಢನಾಮ ಏಕವಚನ. ಭಕ್ತಿಪಂಥ—ಸ: ಏಕವಚನ. (೨) ನಮ್ಮ-ಸರ್ವನಾಮ ಬಹುವಚನ. ರುದ್ರಪ್ಪಸೆಟ್ಟಿಯು—ಏಕವಚನ. ಅವನು—ಸ: ಏಕವಚನ. (೩)

ಪ್ರಭುದೇವರು-ಸನ್ಮಾನಾರ್ಥಕ ಬಹುವಚನ. ನೀಲಕಂಠಶಾಸ್ತ್ರಿಗಳು ಸನ್ಮಾನಾರ್ಥಕ ಬಹುವಚನ. ಪುರಾಣಿಕರು ಬಹುವಚನ. ಇವರು—ಬಹುವಚನ. (೪) ನೀಲವ್ವ—ಏಕವಚನ, ಬಸವ್ವ, ಏಕವಚನ. ರುದ್ರವ್ವ, ಏಕವಚನ. ಹೆಡಿಗೆ-ಏಕವಚನ. ಅವರು-ಬಹುವಚನ. (೫) ಹೆಣ್ಣುಮಕ್ಕಳು—ಬಹುವಚನ. ಗುಡಿ—ಏಕವಚನ. ಭಾವಿ-ಏಕವಚನ. ಮಕ್ಕಳ—ಬಹುವಚನ. ಬಾಯಿ—ಏಕವಚನ. ನೀರು—ಏಕವಚನ. ಹುಣಸೀಮರ—ಏಕವಚನ. (೬) ಜನರು—ಬಹುವಚನ. ವರುಷ—ಏಕವಚನ. ತಮ್ಮ—ಬಹುವಚನ. ದುಡಿಮೆ—ಏಕವಚನ ಶ್ರಾವಣ—ಏಕವಚನ.



## ೧೪ ಜಾತಕ ಕಥೆ

**ಈ ಪಾಠದ ವಿಷಯವು ಯಾವುದು ?**

ಇಟ್ಟ ಹೆಸರು ಕೆಟ್ಟದೆಂದು ಕಂಡುಬಂದರೆ ವ್ಯಕ್ತಿಯ ಗುಣ ಕೆಟ್ಟದಾದೀತೆ ? ಆಕಳು ಕಪ್ಪಾದರೆ ಹಾಲು ಕಪ್ಪಾಗುವುದೆ ? ರೂಪಕ್ಕೂ ಗುಣಕ್ಕೂ ಭೇದ ಎಂಬು ದನ್ನು ಈ ಕತೆ ಹೇಳುವುದು.

**ಈ ಪಾಠದ ಸಾರಾಂಶ**

ವಾರಣಾಸಿಯಲ್ಲಿ ಒಬ್ಬ ಸೆಟ್ಟಿ ಇದ್ದನು. ಆತನಿಗೆ ಕಾಳಕಣ್ಣಿ (ಕರಿಗಾಲ) ಎಂಬ ಗೆಳೆಯನು ಇದ್ದನು. ಕಾಳಕಣ್ಣಿಗೆ ಬಡತನ ಬಂತು. ಸೆಟ್ಟಿಯು ಆಶ್ರಯ ಕೊಟ್ಟನು. ಕಾಳಕಣ್ಣಿಯು ಸೆಟ್ಟಿಯ ಮನೆಯ ವ್ಯವಹಾರವನ್ನು ದಕ್ಷತೆಯಿಂದ ನೋಡಿಕೊಳ್ಳತೊಡಗಿದನು. ಕಾಳಕಣ್ಣಿಯ ಹೆಸರು ಅಶುಭಕಾರಿ ಎಂದು ಮನೆಯ ವರ ಭಾವನೆಯಾಗಿತ್ತು. ಅವನನ್ನು ಹೊರಗೆ ಹಾಕಲು ಸೆಟ್ಟಿಯ ಮಿತ್ರರು ಹೇಳು ತ್ತಿದ್ದರು. ನನ್ನ ಬಾಲಮಿತ್ರನನ್ನು ನಾನು ಬಿಡಲಾರೆ, ಎಂದು ಸೆಟ್ಟಿ ಹೇಳುತ್ತಿ ದ್ದನು. ಸೆಟ್ಟಿ ಒಮ್ಮೆ ಊರಿಗೆ ಹೋಗಬೇಕಾಗಿ ಬಂತು. ಮನೆ ಜೋಕೆಯೆಂದು ಹೇಳಿ ಹೋದನು. ರಾತ್ರಿ ಕಳ್ಳರು ಬಂದರು. ತಮ್ಮಲ್ಲಿ ಮಲಗಿದ ಆಳುಗಳನ್ನು ಎಚ್ಚರಿಸುವಂತೆ ಸೆಟ್ಟಿಯು ಮಾತನಾಡಿದ ಹಾಗೆ ಕಾಳಕಣ್ಣಿಯು ಮಾತನಾಡತೊಡಗಿ ದನು. ಶಂಖ ಉದುತ್ತ ಬಾರಿಸುತ್ತ ಮನೆಯಲ್ಲೆಲ್ಲ ಅಡ್ಡಾಡಿದನು. ಸೆಟ್ಟಿಯು ಮನೆಯಲ್ಲಿಯೆ ಇರುವನೆಂದು ತಿಳಿದು ಕಳ್ಳರು ತಮ್ಮ ಕತ್ತಿ ಕುಡುಗೋಲು ಮುಂತಾ ದ್ದನ್ನು ಅಲ್ಲಿಯೆ ಬಿಟ್ಟು ಹೋದರು. ಕಾಳಕಣ್ಣಿಯ ಜಾಣತನವನ್ನು ಎಲ್ಲರೂ ಮೆಚ್ಚಿ ದರು. ಊರಿಂದ ಬಂದ ಮೇಲೆ ಸೆಟ್ಟಿಗೂ ತಿಳಿಯಿತು ಗುಣದಿಂದ ಮನುಷ್ಯನನ್ನು ಅರಿಯಬೇಕು. ಎಂದು ಹೇಳಿ ಸೆಟ್ಟಿಯು ಮಿತ್ರನನ್ನು ಸತ್ಕರಿಸಿದನು.

**ಕಠಿಣ ಶಬ್ದಗಳ ಅರ್ಥ**

ವೈಭವ ಸಂಪನ್ನ—ಸಿರಿವಂತಿಕೆಯುಳ್ಳ. ಪಾಡು—ಕೆಟ್ಟಸ್ಥಿತಿ. ಅಶುಭ ಕಾರಿ—ಕೆಟ್ಟದನ್ನುಂಟು ಮಾಡುವವ. ದಾರಿದ್ರ್ಯ—ಬಡತನ. ವೈಮರೆತವ—

ಎಚ್ಚರಗೇಡಿ. ತಮಟೆ—ಬಾರಿಸುವ ತೊಗಲಿನ ಉಪಕರಣ; ಹಲಗೆಯಂತಹದು. ಬುದ್ಧಿಸಂಪನ್ನ - ಬುದ್ಧಿಯೆ ಸಂಪತ್ತು ಆಗಿರುವಂತಹನು. ದೋಚಿಕೊಂಡು—ಒತ್ತಾಯದಿಂದ ಕಿತ್ತುಕೊಂಡು.

**ಪ್ರಶ್ನೆ—ಉತ್ತರ**

**ಪ್ರಶ್ನೆ :** ೧ ಕಾಳಕಣ್ಣಿಗೆ ಆಶ್ರಯ ಕೊಡಕೂಡದೆಂದು ಜನರು ಸೆಟ್ಟಿಗೆ ಏಕೆ ಹೇಳಿದರು ?

**ಉತ್ತರ :** ಅವನ ಹೆಸರು ಕರಿಗಾಲ ಎಂದು ಇದೆ. ಅವನು ಅಶುಭಕಾರಿ. ಅವನು ದಾರಿದ್ರ್ಯವನ್ನು ಬೆನ್ನಿಗೆ ಕಟ್ಟಿಕೊಂಡವ. ಅಂಥವನನ್ನು ಇಟ್ಟುಕೊಂಡರೆ ಲಾಭದ ಬದಲು ಹಾನಿಯೇ ಆಗುವುದು. ಆದಕ್ಕೆ ಅವನನ್ನು ಹೊರಗೆ ಹಾಕು. ಎಂದು ಜನರು ಸೆಟ್ಟಿಗೆ ಹೇಳಿದರು.

**ಪ್ರಶ್ನೆ :** ೨ ಕಳ್ಳರು ಸೆಟ್ಟಿಯ ಮನೆಯನ್ನು ಯಾವ ಕಲ್ಪನೆಯಿಂದ ಮುತ್ತಿದರು ?

**ಉತ್ತರ :** ಸೆಟ್ಟಿಯು ತನ್ನ ಆಳುಹೋಳುಗಳನ್ನೆಲ್ಲ ಕರೆದುಕೊಂಡು ಪರ ಊರಿಗೆ ಹೋಗಿರುವನೆಂಬ ಕಲ್ಪನೆಯಿಂದ ಸೆಟ್ಟಿಯ ಮನೆಯನು ಕಳ್ಳರು ಮುತ್ತಿದರು.

**ಪ್ರಶ್ನೆ :** ೩ ಕಾಳಕಣ್ಣಿಯು ಕಳ್ಳರನ್ನು ಓಡಿಸಲು ಯೋಜಿಸಿದ ಹಂಚಿಕೆ ಯಾವುದು ?

**ಉತ್ತರ :** ಮನೆತುಂಬ ಜನವಿದೆ. ಸೆಟ್ಟಿಯೂ ಆಳುಗಳು ಊರಿಗೆ ಹೋಗಿಲ್ಲ ಮನೆಯಲ್ಲಿ ಇದ್ದಾರೆ ಎಂಬುವ ಹಾಗೆ ಹಂಚಿಕೆ ಹಾಕಿದನು. ಸೆಟ್ಟಿಯು ಆಳುಗಳನ್ನು ಎಬ್ಬಿಸಿ ಕೂಗುವ ಹಾಗೆ ಕೂಗಿದನು. ಶಂಖ ಊದಿದನು. ತಮಟೆ ಬಾರಿಸಿದನು. ಜನರು ಎಚ್ಚತ್ತಿರುವರೆಂದು ತೋರಿ ಕಳ್ಳರನ್ನು ಓಡಿಸಿದನು.

**ಪ್ರಶ್ನೆ :** ೪ ಕಾಳಕಣ್ಣಿಯು ಕರಿಗಾಲನಲ್ಲ ಎಂದು ಸೆಟ್ಟಿಯು ಜನರಿಗೆ ಹೇಗೆ ಮನಗಾಣಿಸಿಕೊಟ್ಟನು ?

**ಉತ್ತರ :** ಕಳ್ಳರನ್ನು ಓಡಿಸಿದ ಸುದ್ದಿಯು ಎಲ್ಲರಿಗೂ ತಿಳಿಯಿತು. ಕಾಳಕಣ್ಣಿಯು ಮನೆಯಲ್ಲಿಲ್ಲದಿದ್ದರೆ ಕಳ್ಳರು ಎಲ್ಲ ಧನವನ್ನು ಸೆಟ್ಟಿಯ ಮನೆಯಿಂದ ದೋಚಿಕೊಂಡು ಹೋಗುತ್ತಿದ್ದರು. ಜನರ ಮಾತನ್ನು ಕೇಳಿ ಕಾಳಕಣ್ಣಿಯನ್ನು ಹೊರಗೆ ಹಾಕಿದ್ದರೆ ಅವನ ಕುಟುಂಬವೇ ನಾಶವಾಗುತ್ತಿತ್ತು ಎಂದು ತೋರಿ ಸೆಟ್ಟಿಯು ಜನರಿಗೆ ಕಾಳಕಣ್ಣಿಯು ಕರಿಗಾಲನಲ್ಲ ಎಂದು ಮನಗಾಣಿಸಿ ಕೊಟ್ಟನು.

**ಅಭ್ಯಾಸ :** ೧ ಹೆಸರಿಗಿಂತಲೂ ಗುಣ ಮುಖ್ಯ ಎಂಬ ಮಾತನ್ನು ಈ ಕಥೆಯು ಹೇಗೆ ಸಿದ್ಧಗೊಳಿಸುವುದು ?

ಹೆಸರು ಇನ್ನೊಬ್ಬರು ಇಟ್ಟುದು. ಗುಣಗಳು ವ್ಯಕ್ತಿಯಲ್ಲಿ ಬೆಳೆದುವು. ಗುಣದಿಂದಲೇ ವ್ಯಕ್ತಿಯ ಯೋಗ್ಯತೆ ತಿಳಿವುದು. ಹೆಸರು ಇಡುವಾಗ ಇನ್ನೂ ಗುಣಗಳು

ಬೆಳೆದು ಬಂದಿರುವುದಿಲ್ಲ. ಗುಣಗಳು ಹೆಸರಿಗೆ ಹೊಂದಿಕೊಂಡರೆ ಹೆಸರು ಅನ್ವರ್ಥಕ ವಾಗುವುದು. ಇಲ್ಲದಿದ್ದರೆ ಹೆಸರು ಬರಿಯ ಒಂದು ಹೆಸರು ಆಗಿ ವ್ಯಕ್ತಿಯು ಗುಣ ದಿಂದಲೇ ಮಾನಪಡೆವನು. ಈ ಮಾತನ್ನು ಈ ಕತೆಯು ಎತ್ತಿ ತೋರುವುದು.

೨. ಬಡವನು ಬಾಗಿಲಿಗೆ ಬಂದು ತನ್ನ ಪಾಡನ್ನು ತೋಡಿಕೊಂಡನು. ಪುರಾಣ ಕೇಳುತ್ತ ಕೂತಾಗ ಸಭಿಕರು ಮೈಮರೆತರು. ಸೈನ್ಯವು ಬೆನ್ನಟ್ಟಿ ಬಂದಿತು. ದರೋಡೆಗಾರರು ಬರುವವರಿದ್ದಾರೆಂಬ ಹಾರಿಕೆಯ ಸುದ್ದಿಯನ್ನು ಕೇಳಿ ಹಳ್ಳಿಗರು ಹೌಹಾರಿದರು.

**ವ್ಯಾಕರಣ :** ೨ ಪಾಠ ಓದಿರಿ. ತಿಳಿದುಕೊಂಡು (೩) ನೆಯ ಭಾಗದಲ್ಲಿ ಕೊಟ್ಟ ಶಬ್ದಗಳನ್ನು ನಡಿಸಿ ಬರೆಯಿಯಿರಿ. ಭಾವವು—ಭಾವಗಳು. ಮಾವನು—ಮಾವಂದಿರು. ಮುಂತಾಗಿ ಉಳಿದ ವಿಭಕ್ತಿಗಳಲ್ಲಿ ಬರೆಯಿರಿ.

**ನೆನಪಿಗಾಗಿ :** ಇಟ್ಟಹೆಸರು ಮಹತ್ವದ್ದಲ್ಲ. ಗುಣದಿಂದ ಮನುಷ್ಯರನ್ನು ಅರಿಯಬೇಕು.



## ೧೪ ಕಸ್ತೂರಬಾ

**ಈ ಪಾಠದ ವಿಷಯವು ಯಾವುದು ?**

ಕಸ್ತೂರಬಾ ಯಾರು ? ಅವರು ಗಾಂಧಿಜಿಯವರನ್ನು ಅನುಸರಿಸಿದ ರೀತಿ ಯಾವುದು ? ತಪ್ಪು ಮಾಡಿದರೆ ಯಾರು ಆದರೇನು ತಪ್ಪು ತಪ್ಪೇ ಎಂಬ ಮಾತುಗ ಳನ್ನು ಇಲ್ಲಿ ಹೇಳಿ ಕಸ್ತೂರಬಾ ಇವರ ಚರಿತೆ ಹೇಳಲಾಗಿದೆ.

**ಈ ಪಾಠದ ಸಾರಾಂಶ**

ಮಹಾಪುರುಷರ ಜತೆಯಲ್ಲಿ ಇರುವುದೆಂದರೆ ತಂತಿಯ ಮೇಲೆ ನಡೆದಂತೆ. ಗಾಂಧೀಜಿಯವರ ರೀತಿಯೆ ಬೇರೆ. ಜತೆಗಾರರು ಉತ್ತಮಗೊಳ್ಳಬೇಕೆಂಬುದು ಅವರ ಆಸೆ. ಕಸ್ತೂರಬಾ ಗಾಂಧೀಜಿಯವರ ಹೆಂಡತಿ. ಅವರ ವಾತ್ಸಲ್ಯ ತುಂಬಿದ ಕಣ್ಣು, ಮುಖದ ಕಾಂತಿ, ನೋಡಿದಾಗ ವಾಲ್ಮಿಕಿ ಆಶ್ರಮದಲ್ಲಿಯ ಸೀತಾದೇವಿಯ ನೆನಪಾ ಗುತ್ತದೆ. ಕಸ್ತೂರಬಾ ಕಷ್ಟದಲ್ಲಿ ಸುಖದಲ್ಲಿ ಗಂಡನ ನೆರಳಿನಂತೆ ಹಿಂಬಾಲಿಸಿದ್ದಾಳೆ. ಗಾಂಧೀಜಿ ಕಸ್ತೂರಬಾನನ್ನು ಕಾಡಿದಷ್ಟು ಯಾರೂ ತನ್ನ ಹೆಂಡತಿಯನ್ನು ಪೀಡಿಸಿಲ್ಲ. ಸತ್ಯಾಗ್ರಹಾಶ್ರಮದಲ್ಲಿ ಅಸ್ಪೃಶ್ಯತೆ ಕೂಡದು ಎಂದು ಗಾಂಧೀಜಿ. ಕಸ್ತೂರಬಾ ಮೊದಲು ವಿರೋಧಿಸಿದರು. ಹೀಗೆ ಇರುವದಾದರೆ ಇಲ್ಲಿ ಇರು ಇಲ್ಲವಾದರೆ ಬೇರೆ ಮನೆ ಮಾಡಿಕೊಡುತ್ತೇನೆ ಎಂದು ಗಾಂಧೀಜಿ ಅಂದರು. ಪತಿಸೇವೆ ಪರಮಧರ್ಮವೆಂದು ಕಸ್ತೂರಬಾ ಆಶ್ರಮ ನಿಯಮಗಳನ್ನು ಒಪ್ಪಿದರು. ಆಶ್ರಮದಲ್ಲಿ ಅಸಂಗ್ರಹವ್ರತ. ಒಮ್ಮೆ ಕಸ್ತೂರಬಾ ೨ರೂಪಾಯಿ ತೆಗೆದು ಇಟ್ಟಿದ್ದರು. ಗಾಂಧೀಜಿಗೆ ತಿಳಿದು ಅದನ್ನು

ಬಹಿರಂಗ ಮಾಡಿದರು. ಆಶ್ರಮದಲ್ಲಿ ಒಬ್ಬರು ಜೇನೆ ಬಿದ್ದಿದ್ದರು. ಕಸ್ತೂರಬಾಗೆ ಅದು ತಿಳಿದಿರಲಿಲ್ಲ. ತನ್ನ ಮಗನೇ ಜೇನೇ ಬಿದ್ದಿದ್ದರೆ ತಾಯಿಗೆ ತಿಳಿಯದೇ ಇರುತ್ತಿತ್ತೆ ಎಂದು ತಪ್ಪು ತೋರಿಸಿದರು ಗಾಂಧೀಜಿ ಕಸ್ತೂರಬಾ ಅವರ ತಪಸ್ಸು ಯಾವ ಪತಿವ್ರತೆಯ ತಪಸ್ಸಿಗೆ ಕಡಿಮೆಯಾಗಿಲ್ಲ. ಆಕೆ ಧೀರ ಸತಿ,.

**ಕಠಿಣ ಶಬ್ದಗಳ ಅರ್ಥ**

ಹೆಜ್ಜೇನು—ಹಿರಿಜೇನು. ಸಂಗ—ಸಹವಾಸ. ಶುಶ್ರೂಷೆ—ಆರೈಕೆ. ಸಂಗಾತಿ—ಜತೆಗಾರ. ಅಸಂಗ್ರಹ—ಇಂದಿಗೆಬೇಕು. ನಾಳಿಗೆ ಬೇಕು ಎಂದು ಕೂಡಿ ಇಡಬಾರದೆಂಬ ವ್ರತ. ಅಶ್ರದ್ಧೆ—ವಿಶ್ವಾಸವಿಲ್ಲದ ಭಾವನೆ. ಸಮದೃಷ್ಟಿ—ಎಲ್ಲರೂ ಸಮಾನರು ಎಂಬ ವಿಚಾರವುಳ್ಳ ದೃಷ್ಟಿ ಸಹಚಾರಿಣಿ—ಧರ್ಮಪತ್ನಿ; ಗಂಡನ ಜತೆಗೆ ನಡೆವಾಕೆ. ಚಿಮ್ಮು—ಒಮ್ಮೆಲೆ ಹೊರಬರು.

**ಕಠಿಣ ವಾಕ್ಯಗಳ ಅರ್ಥ**

೧ ಸಿದ್ಧಾಂತಕ್ಕಾಗಿ ಎಂಥ ಬಲಿದಾನವನ್ನಾದರೂ ಕೊಡುವ ಸಾಧಕ ಜಾತಿ ಅವರದು.

ಇದು ಗಾಂಧೀಜಿಯುವರನ್ನು ಬಣ್ಣಿಸುವ ಮಾತು. ಸಿದ್ಧಾಂತವೆಂದರೆ ಕಂಡು ಹಿಡಿದ ತತ್ವದ ಮಾತು. ಅದು ಸರಿಯೆಂದು ಕಂಡ ಮೇಲೆ ಅದು ತತ್ವದ ವಿಷಯವಾಯಿತು. ಅವನ್ನು ಸಾಧಿಸುವುದು ಸಾಧಕನ ರೀತಿ. ಸಾಧಿಸಬೇಕಾದಾಗ ಕಷ್ಟ ಸಂಕಟಗಳು ಬರುವುವು. ಬಲಿದಾನ ಮಾಡಬೇಕಾದ ಪ್ರಸಂಗಗಳೂ ಬರುವುವು. ಸರಿಯಾದುದನ್ನು ಮಾಡದೆ ಬಿಟ್ಟರೆ ಸಾಧಕನ ಜೀವನ ವ್ಯರ್ಥ. ಅದಕ್ಕಾಗಿ ಬಲಿದಾನ ಮಾಡಿಯಾದರೂ ಆಚರಣೆ ಮುಂದರಿಸಬೇಕಾಗುವುದು. ಇಂತಹ ಪ್ರಸಂಗ ಬಂದಾಗ ಗಾಂಧೀಜಿಯುವರು ಹಿಂದು ಮುಂದು ನೋಡದೆ ಯಾವುದೇ ಬಲಿದಾನಕ್ಕೂ ಸಿದ್ಧರಾಗುತ್ತಿದ್ದರು. ಅದಕ್ಕೆ ಅವರನ್ನು ಹಾಗೆ ಬಣ್ಣಿಸಲಾಗಿದೆ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಕಸ್ತೂರಬಾ ಇವರನ್ನು ನೋಡಿದರೆ ಯಾರ ನೆನಪಾಗುವುದು ?

**ಉತ್ತರ :** ಕಸ್ತೂರಬಾ ಇವರನ್ನು ನೋಡಿದರೆ ವಾಲ್ಮೀಕಿ ಆಶ್ರಮದಲ್ಲಿದ್ದ ಸೀತಾದೇವಿಯ ನೆನಪು ಆಗುವುದು.

**ಪ್ರಶ್ನೆ : ೨** ಕಸ್ತೂರಬಾ ಗಾಂಧೀಜಿಯುವರನ್ನು ಅನುಸರಿಸಿದ ರೀತಿಯಾವುದು?

ಉತ್ತರ : ಪತಿವ್ರತೆಯಾದ ಹೆಂಡತಿ ಗಂಡನನ್ನು ಅನುಸರಿಸುವ ರೀತಿಯಲ್ಲಿ ಕಸ್ತೂರಬಾ ಗಾಂಧೀಜಿಯುವರನ್ನು ಅನುಸರಿಸಿದಳು. ಧರ್ಮಾಧರ್ಮದ ಹೊಣೆ ಗಂಡನಿಗಿರಲಿ. ತನಗೆ ಪತಿಸೇವೆ ಸಾಕು, ಎಂಬುದು ಕಸ್ತೂರಬಾ ಅವರ ರೀತಿ. ಗಂಡನ

ಜತೆಗೆ ಸರಿಯಾದ ಹೆಜ್ಜೆ ಹಾಕುತ್ತ ಧರ್ಮದ ಹಾದಿಯಲ್ಲಿ ಸಹಚಾರಿಣಿಯಾಗಿ ನಡೆದಿದ್ದಾಳೆ.

**ಪ್ರಶ್ನೆ : ೩** ಗಾಂಧೀಜಿಯವರು ಕಸ್ತೂರಬಾ ಅವರ ತಪ್ಪನ್ನು ಹೇಗೆ ತೋರಿಸುತ್ತಿದ್ದರು ?

**ಉತ್ತರ :** ಹೆಂಡತಿ ಮಾಡಿದ ತಪ್ಪನ್ನು ಮುಚ್ಚಿಟ್ಟುಕೊಳ್ಳುತ್ತಿದ್ದಿಲ್ಲ. ಒಳಗಿಂದೊಳಗೇ ದಂಡಿಸುತ್ತಿದ್ದಿಲ್ಲ. ಅವಳಿಗೂ ಪಾಠವಾಗಿರಬೇಕು, ಇತರರಿಗೂ ಪಾಠವಾಗಿರಬೇಕು ಎಂಬ ಹಾಗೆ ಅವಳ ತಪ್ಪನ್ನು ಬಹಿರಂಗವಾಗಿ ಹೇಳಿ ದಂಡಿಸುತ್ತಿದ್ದರು.

**ಪ್ರಶ್ನೆ : ೪** ತಮ್ಮ ಪತ್ನಿಯ ವಿಷಯವಾಗಿ ಗಾಂಧೀಜಿಯವರ ಪ್ರೀತಿ ತುಳುಕಿ ಬಂದ ಪ್ರಸಂಗವಾವುದು ?

**ಉತ್ತರ :** ಉಪ್ಪಿನ ಸತ್ಯಾಗ್ರಹದಲ್ಲಿ ಗಾಂಧೀಜಿಗೆ ಸೆರೆಮನೆ ಶಿಕ್ಷೆಯಾದಾಗ ಕಸ್ತೂರಬಾ ಹತ್ತಿರ ಇರಲಿಲ್ಲ. ದೇಶಾಟನೆ ಮಾಡುತ್ತಿದ್ದರು. ಸೆರೆಮನೆಗೆ ಹೋಗುವಾಗ ಯಾರೋ ಗಾಂಧೀಜಿಯವರನ್ನು ಕೇಳಿದರು. ಕಸ್ತೂರಬಾಗೆ ಏನು ಹೇಳಬೇಕು ಎಂದು. ಅವಳಿಗೇನು ಹೇಳುವುದು? ಆಕೆ ಧೀರಸತಿ, ಎಂದು ನಗುತ್ತ ಗಾಂಧೀಜಿ ನುಡಿದರು.

**ಅಭ್ಯಾಸ : ೧** ಡೊಂಬರವನು ತಂತಿಯ ಮೇಲೆ ನಡೆಯುತ್ತಾನೆ. ಸತ್ಯಾಗ್ರಹಿಯಾಗಿ ಜೀವನ ನಡೆಸುವುದೆಂದರೆ ಅದೊಂದು ಅಗ್ನಿಪರೀಕ್ಷೆ. ಸಾಧಕರ ಸಹವಾಸದಲ್ಲಿ ಬೆಳೆಯುವದೆಂದರೆ ಬಂಗಾರಕ್ಕೆ ಪುಟಹಾಕಿದ ಹಾಗೆ. ಶಿಕ್ಷಕರು ವಿದ್ಯಾರ್ಥಿಗಳ ಮನಸ್ಸನ್ನು ಹದಗೊಳಿಸುವರು.

೨ ಸೋತುಗೆಲ್ಲುವದೆಂದರೇನು ?

ನಿಜವಾದ ಸೋಲು ಬಂದಾಗ ಮುಖ ಕೆಳಗೆ ಹಾಕಬೇಕಾದ ಪ್ರಸಂಗ ಇರುವುದು. ಸೋಲು ಎಂಬುದು ಕಾಣುತ್ತಿದ್ದರೂ ಅದರಲ್ಲಿಯ ಗೆಲುವು ಇರುವ ಪ್ರಸಂಗವು ಇರುವುದು; ನನ್ನ ವಿಚಾರ ಹೀಗಿದೆ. ನೀವು ಹೇಳಿದ ಹಾಗೆ ಇರುತ್ತೇನೆ ಎಂಬ ನೀತಿಯನ್ನು ಅನುಸರಿಸಿದ ಕಸ್ತೂರಬಾ ಗಂಡನಿಗೆ ಸೋತಳೆಂದು ಕಾಣುತ್ತದೆ. ಆದರೆ ಗಂಡನು ಹೇಳಿದಂತೆ ನಡೆವುದು ಹೆಂಡತಿಗೆ ಗೆಲುವೇ ಸರಿ. ಅದು ಸತೀ ಧರ್ಮ. ಇಂತಹ ಪ್ರಸಂಗ ಬಂದಾಗ ಸೋತು ಗೆಲ್ಲುವುದು ಎಂದು ಹೇಳುವರು.

**ವ್ಯಾಕರಣ : ೧** ಶಬ್ದಗಳನ್ನು ಬೇರೆ ಬೇರೆ ವಚನ ವಿಭಕ್ತಿಗಳಲ್ಲಿ ನಡಸಿ ಬರೆಯಿರಿ. ಪಾಠದಲ್ಲಿಯ ವಿವರಣೆಯ ಸಹಾಯಪಡೆಯಿರಿ.

೨. ನೀವೇ ಮಾಡಿರಿ.

೩. ಲಿಂಗ, ವಚನ, ವಿಭಕ್ತಿ ಹೇಳಿರಿ.

ಹೆಣ್ಣಿನ—ಸ್ತ್ರೀಲಿಂಗ ಷಷ್ಟಿ ಏಕವಚನ. ಪುರುಷರ—ಪುಲ್ಲಿಂಗ ಷಷ್ಟಿ ಬಹುವಚನ. ಗಾಂಧೀಜಿಗೆ—ಪುಲ್ಲಿಂಗ ಚತುರ್ಥಿ ಏಕವಚನ, ಕಸ್ತೂರಬಾನನ್ನು—ಸ್ತ್ರೀಲಿಂಗ ದ್ವಿತೀಯ ಏಕವಚನ. ಸಂಗತಿಗಳನ್ನು—ನಪುಂಸಕಲಿಂಗ ದ್ವಿತೀಯಾ ಬಹು

ವಚನ, ಆಕೆಗೆ—ಸ್ತ್ರೀಲಿಂಗ ಚತುರ್ಥಿ ಏಕವಚನ. ಚಿಕ್ಕವರಲ್ಲಿ—ಪುಲ್ಲಿಂಗ ಸಪ್ತಮಿ ಬಹುವಚನ. ಹೆಂಡತಿಯನ್ನು—ಸ್ತ್ರೀಲಿಂಗ ದ್ವಿತೀಯಾ ಏಕವಚನ.

**ನೆನಪಿಗಾಗಿ :** ೧ ಸಜ್ಜನರ ಸಂಗ ಹೆಜ್ಜೇನು ಸವಿದಂತೆ.

೨, ಗಂಡನ ಜತೆಯಲ್ಲಿ ಹೆಜ್ಜೆಗೆ ಸರಿಯಾದ ಹೆಜ್ಜೆ ಹಾಕುತ್ತ ಧರ್ಮದ ಹಾದಿಯಲ್ಲಿ ಸಹಚಾರಿಣಿಯಾಗಿ ನಡೆವುದು ಸತೀಧರ್ಮ.



# ೧೫ ಕಳ್ಳರ ಸಮ್ಮೇಲನ

**ಈ ಪಾಠದ ವಿಷಯವು ಯಾವುದು ?**

ಕಳ್ಳತನವಾದರೂ ಒಂದ ವೃತ್ತಿ. ಅವರಿಗೂ ಅಡ್ಡಿ ಆತಂಕಗಳು ಇರುವುವು. ಸಭೆ ಸಮ್ಮೇಲನ ನಡಸಿ ಪರಿಹಾರ ಕೈಕೊಳ್ಳಬೇಕಲ್ಲವೆ? ಅಂತಹ ಸಮ್ಮೇಲನದ ವಿಷಯ ಇಲ್ಲಿದೆ. ಇದೊಂದು ನಗೆ ಬರೆಹವೆಂಬುದನ್ನು ಲಕ್ಷ್ಯದಲ್ಲಿಡಬೇಕು.

**ಈ ಪಾಠದ ಸಾರಾಂಶ**

ನಮ್ಮ ಊರು ಕುಮುರಿ. ನಮ್ಮ ಊರಲ್ಲಿ ಇದುವರೆಗೆ ಯಾವ ಸಮ್ಮೇಲನವೂ ಆಗಿಲ್ಲ. ಆದರ ಕಳ್ಳರ ಅಖಿಲ ಭಾರತೀಯ ಪ್ರಥಮ ಮಹಾ ಸಭೆ ಜರುಗಿತು. ಎಷ್ಟು ಜನರು ಬಂದರು ಇದು ಮಹತ್ವದ ಮಾತಲ್ಲ. ಹನಮೇಶಿ ಹಾರಣ್ಣವರ ಇವರು ಸ್ವಾಗತಾಧ್ಯಕ್ಷರು. ಆವರು ಕಳುವು ಮಾಡಿ ನಾಲ್ಕು ಸಲ ಸಶ್ರಮ ಶಿಕ್ಷೆ ಅನುಭವಿಸಿವವರು. ಒಟ್ಟು ೨೫ ವರುಷಗಳ ಸೆರೆಮನೆಯ ಅನುಭವ ಅವರಿಗೆ ಇದೆ. ಸ್ವಾಗತಾಧ್ಯಕ್ಷರಾಗಲು ಅವರೇ ಅರ್ಹರು. ಅಧ್ಯಕ್ಷ ಸ್ಥಾನವನ್ನು ತುಂಬ ಲಕ್ಕಣ್ಣನು ಅಲಂಕರಿಸುವನು. ಅಧ್ಯಕ್ಷರ ಮೆರವಣಿಗೆ ವೈಭವದಿಂದ ಸಾಗಿತು. ಆ ಗದ್ದಲವಲ್ಲಿ ಅಧ್ಯಕ್ಷರ ಉಂಗುರ ಮತ್ತು ಗಡಿಯಾರ ಕಾಣದಾದವು. ಅದಕ್ಕೂ ಹೆಚ್ಚು ಬೆಲೆಬಾಳುವ ಉಂಗುರ–ಗಡಿಯಾರುಗಳನ್ನು ಸ್ವಯಂಸೇವಕರು ತಂದುಕೊಟ್ಟು ಕರ್ತವ್ಯದಕ್ಷತೆ ತೋರಿದರು. ಸ್ವಾಗತಾಧ್ಯಕ್ಷರು ಪ್ರಾರಂಭಭಾಷಣಮಾಡಿ ಸಮ್ಮೇಲನದ ಆವಶ್ಯಕತೆಯನ್ನು ಮನಗಾಣಿಸಿಕೊಟ್ಟರು. ರಾಷ್ಟ್ರದ ಏಳಿಗೆಯಾಗಬೇಕಾದರೆ ಸಂಪತ್ತು ಒಂದೆಡೆಗೆ ಕೂಡಿಬೀಳಬಾರದು. ಸಾಂಪತ್ತಿಕ ಸಮಾನತೆ ಉಂಟುಮಾಡುವ ಮಹಾಕಾರ್ಯ ನಮ್ಮದು. ನಮ್ಮನ್ನು ಅಭಿನಂದಿಸುವ ಬದಲು ಶಿಕ್ಷಿಸುತ್ತಾರೆ. ಕಲಿಯುಗದಲ್ಲಿ ಎಲ್ಲವೂ ವಿಪರೀತವಾಗಿದೆ. ನೂರುವರುಷಗಳ ಹಿಂದೆ ನಮ್ಮ ಉದ್ಯೋಗಕ್ಕೆ ಸಿರಿವಂತರ ಆಶ್ರಯವಿತ್ತು. ಠಕ್ಕರು ರಾಜಪದವಿಯನ್ನು ಸಂಪಾದಿಸಿದರು. ಈಗ ಕಳವಿನ ತಂಗಿಯಾದ ಲಂಚಕ್ಕೆ ಪ್ರತಿಷ್ಠೆ ಬಂದಿದೆ. ಕಳ್ಳತನ ಮಾಡಿದವರನ್ನು ಹೀಯಾಳಿಸಿದವರೂ ಲಂಚದಿಂದ ಹಣಗಳಿಸಿದವರಿಗೆ ಮನ್ನಣೆಕೊಡುವುದು ಸಮಾಜ. ಕಳವಿನಿಂದ ಪ್ರಸಂಗಾವಧಾನ ಹೆಚ್ಚುವುದು. ಈ ಕಾಯಕವು ಕೀಳಲ್ಲ, ಅಧ್ಯಕ್ಷರಬಗ್ಗೆ ನಿಜವಾದ ಸಂಗತಿ ಹೇಳಬೇ

ಕೆಂದರೆ ನಾನು ಕಾಗದ ಮಸಿ ಕಳವುಮಾಡುವುದರಲ್ಲಿಯೆ ಆಯುಷ್ಯ ಕಳೆಯಬೇಕಾದೀತು. ಒಂದು ದಿನವೂ ಇವರು ಕಾಯಕ ತಪ್ಪಿಸಲಿಲ್ಲ. ಎಂದೂ ಅವರು ತಮ್ಮ ವ್ರತ ಬಂಗ ಮಾಡಿಲ್ಲ. ಇಂತಹ ಅಧ್ಯಕ್ಷರು ದೊರೆತಿದು ನಮ್ಮ ಭಾಗ್ಯವೇಸರಿ.

**ಕಠಿಣ ಶಬ್ದಗಳ ಅರ್ಥ**

ವಿಷಾದ—ದುಃಖ. ಅರ್ಹ—ಯೋಗ್ಯ. ಮಗ್ನ—ತನ್ಮಯ. ಅನಾಯಾಸ—ಆಯಾಸವಿಲ್ಲದೆ; ಶ್ರಮವಿಲ್ಲದೆ. ಸೊಪ್ಪು ಹಾಕದೆ—ಹಿಂಜರಿಯದೆ; ಹೆದರದೆ. ದಂದುಗ—ಉದ್ವೇಗ. ಪ್ರತಿಷ್ಠೆ—ಮನ್ನಣೆ. ಪ್ರಸಂಗಾವಧಾನ—ಪ್ರಸಂಗಕ್ಕೆ ತಕ್ಕ ಜಾಗ್ರತಿ. ಕೈಚಳಕ—ಕೈ-ಕೌಶಲ. ಕಾಯಕ—ಹೊಟ್ಟೆಯ ಸಲುವಾಗಿ ಮಾಡುವ ಕೆಲಸ. ಪಳಗಿದ—ಕುಶಲತೆ ಪಡೆದ.

**ಪ್ರಶ್ನೆ–ಉತ್ತರ**

**ಪ್ರಶ್ನೆ : ೧** ಕುಮರಿಯಲ್ಲಿ ಯಾವ ಸಮ್ಮೇಲನವು ಜರುಗಿತು ?

**ಉತ್ತರ :** ಕುಮರಿಯಲ್ಲಿ ಕಳ್ಳರ ಅಖಿಲ ಭಾರತೀಯ ಪ್ರಥಮ ಮಹಾಸಭೆ ಜರುಗಿತು.

**ಪ್ರಶ್ನೆ : ೨** ಅಧ್ಯಕ್ಷರನ್ನು ಹೇಗೆ ಸ್ವಾಗತಿಸಿದರು ?

**ಉತ್ತರ :** ಸಮ್ಮೇಲನದ ದಿನದ ಮುಂಜಾನೆ ಎಂಟು ಗಂಟೆಗೆ ಅಧ್ಯಕ್ಷರು ಆ ಊರಿಗೆ ತಲುಪುವವರಿದ್ದರು. ಅವರನ್ನು ಸನ್ಮಾನದಿಂದ ಕರೆದು ತರುವುದಕ್ಕಾಗಿ ಜನರು ತಂಡತಂಡಗಳಾಗಿ ಹೊರಟರು. ಸ್ವಯಂಸೇವಕರು ಉತ್ಸಾಹದಿಂದ ಅಧ್ಯಕ್ಷರ ಬಂಡಿಯನ್ನು ತಾವೇ ಎಳೆದುಕೊಂಡು ಬಂದರು.

**ಪ್ರಶ್ನೆ : ೩** ತಾವು ಮಾಡುವ ಕಾರ್ಯವು ಮಹಾಕಾರ್ಯವೆಂದು ಹನುಮೋಶಿಯು ಹೇಗೆ ಸಮರ್ಥಿಸಿಕೊಳ್ಳುವನು ?

**ಉತ್ತರ :** ಜಗತ್ತಿನಲ್ಲಿ ಸಂಪತ್ತು ಒಂದೆಡೆ ಕೂಡಿಬೀಳುವುದು ಗಂಡಾಂತರ. ಅದನ್ನು ತಪ್ಪಿಸಿ ಹಂಚುವ ಕಾರ್ಯವನ್ನು ತಾವು ಮಾಡುವುದಾಗಿ ಹೇಳಿದನು. ಜಿಪುಣರು ಹಣ ಕೂಡಿಟ್ಟು ಅದರ ಉಪಯೋಗ ರಾಷ್ಟ್ರಕ್ಕೆ ಆಗದಂತೆ ಮಾಡುವರು. ಅಂಥವರಿಂದ ತೆಗೆದುಕೊಂಡ ರಾಷ್ಟ್ರದ ಸಂಪತ್ತಿಗೆ ಮತ್ತೆ ಚಾಲನೆ ಕೊಡುವ ಶ್ರೇಯಸ್ಸು ತಮಗೆ ಇದೆ. ಒಂದು ವಸ್ತುವು ಕಳೆಯಿತೆಂದರೆ ಮತ್ತೊಂದನ್ನು ತೆಗೆದುಕೊಳ್ಳುವುದರಿಂದ ದೇಶದ ಕೈಗಾರಿಕೆ ಬೆಳೆವುದು. ಹೀಗಾಗಿ ತಾವು ಮಾಡುವುದು ಮಹಾಕಾರ್ಯವೆಂದು ಹನುಮೋಶಿಯು ಸಮರ್ಥಿಸಿಕೊಂಡನು.

**ಪ್ರಶ್ನೆ: ೪** ಕಳವಿನ ತಂಗಿ ಯಾರು ?

**ಉತ್ತರ :** ಕಳುವಿನ ತಂಗಿ ಲಂಚ

**ಪ್ರಶ್ನೆ : ೫** ಅಧ್ಯಕ್ಷರು ಕಳವಿನ ವಿದ್ಯೆಯಲ್ಲಿ ಹೇಗೆ ಪಾರಂಗತರಿದ್ದರು ?

**ಉತ್ತರ :** ಅಧ್ಯಕ್ಷರು ತಮ್ಮ ಆಯುಷ್ಯದಲ್ಲಿ ಒಂದು ದಿನವೂ ತಮ್ಮ ಕಾಯಕವನು ತಪ್ಪಿಸಿಲ್ಲ. ಈಗ ಅಧ್ಯಕ್ಷರಾಗಿ ಕುಳಿತಾಗಲೂ ಅವರು ವ್ರತಭಂಗ ಮಾಡ

ಲಿಲ್ಲ. ಇಂದು ಕೂಡ ಅವರು ತಮ್ಮ ಕೈಗುಣ ತೋರಬೇಕು. ವಿದ್ಯಾಲಯಲ್ಲಿ ಮೊದಲನೆಯ ವರ್ಗದಲ್ಲಿ ಮೊದಲನೆಯ ಸ್ಥಾನಪಡೆದು ಮೆಚ್ಚುಗಳನ್ನು ಪಡೆದಿದ್ದಾರೆ.

**ಅಭ್ಯಾಸ :** ೧. ಗೋವಿಂದರಾಯರು ಕರ್ನಾಟಕ ಸಂಘದ ಅಧ್ಯಕ್ಷರಾಗಿದ್ದಾರೆ. ಸಾಹಿತ್ಯ ಸಮ್ಮೇಲನಕ್ಕೆ ಸ್ವಾಗತ ಸಮಿತಿಯು ಏರ್ಪಾಡಾಯಿತು. ಅಧ್ಯಕ್ಷರು ಬರದೆ ಇದ್ದಾಗ ಕಾರ್ಯಾಧ್ಯಕ್ಷರು ಕೆಲಸ ಸಾಗಿಸಿಕೊಂಡು ಹೋಗುವರು. ಸಭೆಯಲ್ಲಿ ಮಂಡಿಸಿದ ಗೊತ್ತುವಳಿಯು ಸರ್ವಾನುಮತದಿಂದ ಸ್ವೀಕೃತವಾಯಿತು.

೨. ನೀವೇ ಮಾಡಿರಿ.

೩. ಸೋಮಾರಿಗಳ ಸಮ್ಮೇಲನ ಜರುಗಿಸುವುದೆಂದರೆ ಬಲು ಕಷ್ಟದ ಕೆಲಸ. ಕೆಲಸಮಾಡಲಿಕ್ಕೇ ಒಲ್ಲೆನ್ನುವವರು ಕಷ್ಟದ ಕೆಲಸವನ್ನಾದರೂ ಹೇಗೆ ಮಾಡಿಯಾರು? ಆದರೂ ಸಮ್ಮೇಲನ ಜರುಗಿಸಬೇಕೆಂದು ಒಬ್ಬ ಸೋಮಾರಿ ವಿಚಾರಮಾಡಿದನು. ಅರ್ಥಾತ್ ಅವನೇ ಸ್ವಾಗತಾಧ್ಯಕ್ಷನಾದನು. ಮೂರುವರ್ಷಗಳು ಉರುಳಿದುವು. ಯಾರೋ ಒಬ್ಬರು — ಈ ಸಮ್ಮೇಲನದ ಸುದ್ದಿಯನ್ನು ಪತ್ರಿಕೆಯಲ್ಲಿ ಹಾಕಿದರು. ಸೋಮಾರಿಗಳು ಯಾರೂ ಪತ್ರಿಕೆ ಓದಲಿಲ್ಲ. ಓದಿದವರು ಸಮ್ಮೇಲನಕ್ಕೆ ಪುಷ್ಟಿ ಕೊಟ್ಟರು. ಸೋಮಾರಿಗಳು ತಮ್ಮ ತಮ್ಮ ಮನೆಯಲ್ಲಿಯೆ ಇದ್ದು ತಮ್ಮ ತಮ್ಮ ಗೊತ್ತುವಳಿಗಳನ್ನು ಸ್ವಿಕರಿಸಿದರು. ಹೀಗೆ ವಿಷಯ ಬರುವ ಹಾಗೆ ನೀವೇ ಬರೆಯಿರಿ.

**ವ್ಯಾಕರಣ :** ೩ ಲಿಂಗ ವಿಭಕ್ತಿ ವಚನ ಹೇಳಿರಿ,

೧. ಜಿಪುಣ—ಪು. ಪ್ರಥಮಾ ಬಹುವಚನ. ಪೈ—ನಪು. ದ್ವಿತೀಯಾ ಏಕವಚನ. ನೆಲದಲ್ಲಿ—ನಪು. ಸಪ್ತಮಿ ಏಕವಚನ.

೨. ಸಾವುಕಾರರು—ಪು. ಪ್ರಥಮಾ ಬಹುವಚನ. ಬಡವರನ್ನು—ಪುಲ್ಲಿಂಗ ದ್ವಿತೀಯಾ ಬಹುವಚನ. ಅವರಿಂದ—ಪು. ಪಂಚಮೀ—ಬಹುವಚನ. ಹಣವನ್ನು—ನಪುಂಸಕಲಿಂಗ, ದ್ವಿತೀಯಾ ಏಕವಚನ. ತಿಜೋರಿಯಲ್ಲಿ—ನಪು. ಸಪ್ತಮಿ ಏಕವಚನ.

೩. ಹೆಣ್ಣುಮಕ್ಕಳಿಗೆ—ಸ್ತ್ರೀಲಿಂಗ ಚತುರ್ಥಿ ಬಹುವಚನ. ಆಭರಣಗಳ—ನಪು. ಷಷ್ಠಿ ಬಹುವಚನ.

೪. ದೇಶದ....ನಪು. ಷಷ್ಠಿ ಏಕವಚನ. ರೂಪಾಯಿಗಳ—ನಪು. ಷಷ್ಠಿ ಬಹುವಚನ. ಬಗೆಯಲ್ಲಿ—ನಪು ಸಪ್ತಮಿ ಏಕವಚನ.

೫. ಇದರಿಂದ—ನಪು. ತೃತೀಯಾ ಏಕವಚನ. ದೇಶದಲ್ಲಿ ನಪು ಸಪ್ತಮಿ ಏಕವಚನ. ಉದ್ಯೋಗ—ಧಂದೆಗಳ—ನಪು. ಷಷ್ಠಿ ಬಹುವಚನ. ಬೆಳವಣಿಗೆ—ನಪು. ಪ್ರಥಮಾ ಏಕವಚನ.



# ೧೬ ಗಾನವಿಶಾರದ ಪಂಚಾಕ್ಷರಿ ಸ್ವಾಮಿಗಳು

**ಈ ಪಾಠದ ವಿಷಯು ಯಾವುದು ?**

ಪಂಚಾಕ್ಷರಿ ಸ್ವಾಮಿಗಳು ಯಾರು ? ಅವರು ಯಾವ ಕಾರ್ಯ ಮಾಡಿದರು ? ಅವರು ಕಾರ್ಯ ಮಾಡಲು ಸ್ಫೂರ್ತಿಕೊಟ್ಟವರು ಯಾರು? ಅವರಿಗೆ ಲೋಕಮನ್ನಣೆ ಹೇಗೆ ದೊರೆಯಿತು, ಮುಂತಾಗಿ ಅವರ ಚರಿತೆಯನ್ನು ಇಲ್ಲಿ ಹೇಳಿದೆ.

**ಈ ಪಾಠದ ಸಾರಾಂಶ**

ಪಂಚಾಕ್ಷರಿ, ಧರ್ಮಾರ್ಥವಾಗಿ ವಿದ್ಯೆಕಲಿಸು; ನಿನ್ನ ವಿದ್ಯೆಯು ಏಕತ್ರವಾಗದೆ. ಸರ್ವತ್ರವಾಗಲಿ, ಎಂದು ಹರಸಿದರು ಶ್ರೀ ಕುಮಾರಸ್ವಾಮಿಯವರು. ಹಾನಗಲ್ಲ ಕುಮಾರ ಸ್ವಾಮಿಗಳೆಂದರೆ ಸಮಾಜದ ಹಿತಚಿಂತಕರು. ಪಂಚಾಕ್ಷರಿ, ಕುರುಡ. ಆದರೆ ಕೋಕಿಲ ಕಂಠನು. ಹತ್ತಿಪ್ಪತ್ತು ಸಾವಿರ ರೂಪಾಯಿ ವೆಚ್ಚಮಾಡಿ ಪಂಚಾಕ್ಷರಿಗೆ ದಕ್ಷಿಣೋತ್ತರ ಸಂಗೀತ ಪದ್ಧತಿಯ ಶಿಕ್ಷಣ ಕೊಡಿಸಿದರು. ಶಿಷ್ಯರಿಂದ ಸಂಗೀತ ಪ್ರಸಾರ ಮಾಡಬೇಕೆಂದರು. ೧೯೧೧ರಲ್ಲಿ ಸಂಗೀತ ವಿದ್ಯಾಲಯವು ಸ್ಥಾಪಿತವಾಯಿತು. ಕಲಿಯಲಿಕ್ಕೆ ಬಂದವರಿಗೆ ಉಚಿತ ಊಟ-ವಸತಿ ಏರ್ಪಾಡು ಮಾಡಿದರು. ಬಾದಾಮಿಯ ಹತ್ತಿರ ಶಿವಯೋಗಮಂದಿರವು ಕುಮಾರ ಸ್ವಾಮಿಗಳಿಂದ ಸ್ಥಾಪಿಸಲ್ಪಟ್ಟಿತ್ತು. ಧರ್ಮವನ್ನು ಸಂಗೀತದ ಮೂಲಕ ಪ್ರಸಾರಮಾಡಬೇಕೆಂದರು. ವಚನಗಳನ್ನು ಭಕ್ತಿ ಪುರಸ್ಸರವಾಗಿ ಹೇಳಿದರೆ ಲೋಕವೇ ಕೇಳೀತು ಎಂದರು. ಪಂಚಾಕ್ಷರಿಯನ್ನು ಆ ಕೆಲಸಕ್ಕೆ ಹಚ್ಚಿದರು. ಶಿವಯೋಗ ಮಂದಿರವು ಸಂಗೀತ ಸರಸ್ವತೀ ಮಂದಿರವೂ ಆಯಿತು. ಪಂಚಾಕ್ಷರಿಗಳು ಆಜನ್ಮ ಬ್ರಹ್ಮಚಾರಿಯಾಗಿರಲು ಸಂಕಲ್ಪ ಮಾಡಿದರು. ಕುರುಡರು, ಅಂಗಹೀನರು ಸಂಗೀತ ಕಲಿಯಬೇಕೆಂದು ಬಗೆದರು. ಪಂಚಾಕ್ಷರಿಯವರಿಗೆ ಹೋದಲ್ಲೆಲ್ಲ ಮನ್ನಣೆ ದೊರೆಯಿತು. ಚಿಕ್ಕ ಮಕ್ಕಳಿಗಾಗಿ ಗಜೇಂದ್ರಗಡದಲ್ಲಿ ಶಾಲೆ ಸ್ಥಾಪಿಸಿ ದೊಡ್ಡವರನ್ನು ತಮ್ಮೊಡನೆ ಸಂಚಾರಕ್ಕೆ ಕರೆದುಕೊಂಡು ಹೊರಟರು. ೧೯೩೦ರಲ್ಲಿ ಹಾನಗಲ್ಲ ಸಾಮಿಗಳು ಲಿಂಗೈಕ್ಯರಾದರು. ಯುದ್ಧಕಾಲದಲ್ಲಿಯ ಆಹಾರ ನಿಯಂತ್ರಣವಿದ್ದರೂ ನೂರಾರು ವಿದ್ಯಾರ್ಥಿಗಳನ್ನು ಕಟ್ಟಿಕೊಂಡು ಪಂಚಾಕ್ಷರಿ ಅಲೆದರು. ಸಾಲವಾಯಿತು. ಒಂದು ನಾಟಕ ಕಂಪನಿ ಸ್ಥಾಪಿಸಿದರು. ಲಕ್ಷ್ಮಿ ಕಣ್ಣು ತೆರೆದಳು. ಗದುಗಿನಲ್ಲಿ ವೀರೇಶ್ವರ ಪುಣ್ಯಾಶ್ರಮ ತಲೆಯೆತ್ತಿತ್ತು. ೧೯೪೪ರಲ್ಲಿ ಪಂಚಾಕ್ಷರಿ ಸ್ವಾಮಿಗಳು ಲಿಂಗೈಕ್ಯರಾದರು. ಪಂಚಾಕ್ಷರಿ ಸ್ವಾಮಿಗಳ ಶಿಷ್ಯರು ಕರ್ನಾಟಕದ ಮೂಲೆ ಮೂಲೆಯಲ್ಲಿದ್ದಾರೆ.

**ಕಠಿಣ ಶಬ್ದಗಳ ಅರ್ಥ**

ಸಾರ್ಥಕ—ಅರ್ಥಪೂರ್ಣ; ಅರ್ಥಸಹಿತ, ಅವನತಿ—ಹೀನಸ್ಥಿತಿ. ಉಚಿತ—ಪುಕ್ಕಟೆ. ಅಂಧ—ಕುರುಡ, ದೈವಾಧೀನರಾಗು—ಮರಣಹೊಂದು. ಅನಾವೃಷ್ಟಿ—ಮಳೆಯಾಗದಿರುವಿಕೆ. ದುರ್ಭಿಕ್ಷ—ಬರಗಾಲ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಶ್ರೀ ಕುಮಾರಸ್ವಾಮಿಗಳು ಪಂಚಾಕ್ಷರಿ ಸ್ವಾಮಿಗಳಿಗೆ ಕೊಟ್ಟ ಆಶೀರ್ವಾದವು ಯಾವುದು ?

**ಉತ್ತರ :** ಇನ್ನು ಮೇಲೆ ನೀನು ನಿನ್ನ ಹೆಸರು ಸಾರ್ಥಕ ಮಾಡಿಕೊಳ್ಳಬೇಕು. ಅದಕ್ಕಾಗಿ ಬ್ರಹ್ಮಚಾರಿಯಾಗಿ ಜಾತಿ-ಮತ ಪಂಥಗಳೆನ್ನದೆ ಸಕಲ ಜಾತಿಯ ಅನಾಥ ಅಂಗಹೀನರಿಗೆ ಅನ್ನ ಬಟ್ಟೆಗಳನ್ನು ಕೊಟ್ಟ ಧರ್ಮಾರ್ಥವಾಗಿ ವಿದ್ಯೆ ಕಲಿಸು. ನಿನ್ನ ವಿದ್ಯೆಯು ಏಕತ್ರವಾಗದೆ ಸರ್ವತ್ರವಾಗಲಿ. ಎಂದು ಪಂಚಾಕ್ಷರಿ ಸ್ವಾಮಿಗಳನ್ನು ಹಾನಗಲ್ಲ ಶ್ರೀ ಕುಮಾರಸ್ವಾಮಿಗಳು ಆಶೀರ್ವದಿಸಿದರು.

**ಪ್ರಶ್ನೆ : ೨** ಪಂಚಾಕ್ಷರಿಗಳು ಸಂಗೀತದ ಯಾವ ಪದ್ಧತಿಯಲ್ಲಿ ಶಿಕ್ಷಣ ಪಡೆದರು ?

**ಉತ್ತರ :** ಪಂಚಾಕ್ಷರಿಗಳು ದಕ್ಷಿಣದ ಕರ್ನಾಟಕ ಪದ್ಧತಿಯ ಸಂಗೀತವನ್ನು ಉತ್ತರದ ಹಿಂದುಸ್ತಾನಿ ಪದ್ಧತಿಯ ಸಂಗೀತವನ್ನು ಕಲಿತರು

**ಪ್ರಶ್ನೆ : ೩** ಪಂಚಾಕ್ಷರಿಗಳು ಬಡವಿದ್ಯಾರ್ಥಿಗಳಿಗೆ ಅನ್ನವಸ್ತ್ರಗಳನ್ನು ಹೇಗೆ ಪೂರೈಸಿದರು ?

**ಉತ್ತರ :** ಪಂಚಾಕ್ಷರಿಗಳು ಸಂಚಾರ ಕೈಕೊಂಡು ಜನತೆಗೆ ಸಂಗೀತದ ರಸ ದೂಟ ಉಣಿಸಿ ಧನ ಸಂಪಾದನೆ ಮಾಡಿ ಬಡವಿದ್ಯಾರ್ಥಿಗಳಿಗೆ ಅನ್ನ ವಸ್ತ್ರಗಳನ್ನು ಪೂರೈಸಿದರು.

**ಪ್ರಶ್ನೆ : ೪** ಅನಾವೃಷ್ಟಿಯಿಂದ ಉಂಟಾದ ಆಪತ್ತನ್ನು ಅವರು ಹೇಗೆ ಎದುರಿಸಿದರು ?

**ಉತ್ತರ :** ಪಂಚಾಕ್ಷರಿಗಳು ಒಂದು ನಾಟಕ ಕಂಪನಿ ಸ್ಥಾಪಿಸಿದರು. ಅದರಿಂದ ಅವರು ಹಣ ಗಳಿಸಿದರು. ಬರಗಾಲದಲ್ಲಿಯ ಅನ್ನದ ಭವಣೆಯನ್ನು ಈ ಧನ ಸಂಪತ್ತಿಯಿಂದ ಕಡಿಮೆಮಾಡಿ ಬಂದ ಆಪತ್ತನ್ನು ಪರಿಹರಿಸಿದರು.

**ಪ್ರಶ್ನೆ : ೫** ಪಂಚಾಕ್ಷರಿಗಳಿಗೆ ಲೋಕ ಮನ್ನಣೆ ಹೇಗೆ ದೊರೆಯುತ್ತಾ ಹೋಯಿತು ?

**ಉತ್ತರ :** ವಚನಗಳನ್ನು ಸುಸ್ವರವಾಗಿ ಹೇಳುತ್ತಿದ್ದರು. ಸಂಗೀತವನ್ನು ಹೊಟ್ಟೆಯ ಪಾಡಿಗಾಗಿ ವೃತ್ತಿಯೆಂದು ಮಾಡದೆ, ಕುಂಟರು—ಅಂಗಹೀನರು ಸಮಾಜಕ್ಕೆ ಭಾರವಾಗಬಾರದೆಂದು ಉಚಿತ ಶಿಕ್ಷಣ ಕೊಡುತ್ತಿದ್ದರು. ಅದರಿಂದ ಜನತೆಯಲ್ಲಿ ಇವರ ಬಗ್ಗೆ ಆದರ ಭಾವ ಹುಟ್ಟಿತು. ಅಲ್ಲಲ್ಲಿ ಶಾಲೆ—ಮಠಗಳನ್ನು ಸ್ಥಾಪಿಸಿ ವಿದ್ಯಾರ್ಥಿಗಳಿಗೆ ಊಟ—ವಸತಿ ಉಚಿತವಾಗಿ ಕೊಟ್ಟು ಸಂಗೀತ ಶಿಕ್ಷಣ ಕೊಡುತ್ತಿದ್ದರು. ಇದರಿಂದಾಗಿ ಅವರಿಗೆ ಲೋಕಮನ್ನಣೆ ದೊರೆಯಿತು. ಧನ ಕೊಡುವವರು ಧನ ಕೊಟ್ಟರು. ಮಠ ಕಟ್ಟಿಸಿಕೊಡುವವರು ಮಠ ಕಟ್ಟಿಸಿಕೊಟ್ಟರು.

**ಅಭ್ಯಾಸ :** ೧. ಪಂಚಾಕ್ಷರಿಗಳ ದನಿಯು ಇಷ್ಟು ಇನಿದಾಗಿದ್ದಿತು ಕೋಕಿಲೆಯೇ ಕಂಠದಲ್ಲಿ ಮನೆಮಾಡಿಕೊಂಡಿರುವಳೋ ಏನೋ ಎನ್ನಿಸಿತು.

ತಂಬೂರಿಯ ಸ್ವರಕ್ಕೂ ಅವರ ಕಂಠಸ್ವರಕ್ಕೂ ಭೇದವೆನ್ನಿಸದ ಹಾಗೆ ಸಮರಸ-ಸಮಸ್ವರವುಳ್ಳವಾಗಿದ್ದವು.

೨. ಉಪ್ಪಿನ ಸತ್ಯಾಗ್ರಹಕ್ಕಾಗಿ ಹೊರಟ ಗಾಂಧೀಯವರು ವಜ್ರಸಂಕಲ್ಪ ಮಾಡಿದರು. ಆಗ ಅನೇಕರು ಬ್ರಿಟಿಶರ ಲಾಠಿಗಳ ಹೊಡೆತಕ್ಕೆ ತುತ್ತಾದರು. ಅನಾವೃಷ್ಟಿಯ ಮೂಲಕ ದೇಶದಲ್ಲಿ ಬರಗಾಲ ತಲೆದೋರಿತು. ಸಂಸ್ಕೃತ ಕಾವ್ಯಗಳಲ್ಲಿಯ ಶ್ಲೋಕಗಳ ಶಾಸ್ತ್ರಿಗಳಿಗೆ ಕರತಲಾಮಲಕವಾಗಿದ್ದವು.

**ವ್ಯಾಕರಣ :** ೫ ಬೀಗ—ಬೀಗಿತ್ತಿ. ಗಾಣಿಗ—ಗಾಣಿಗಿತ್ತಿ. ಗುಣವಂತ—ಗುಣವಂತಿ. ನಲ್ಲ—ನಲ್ಲೆ. ಅರಸ—ಅರಸಿ.



# ೧೭ ದಿಲೀಪನ ಸತ್ವಪರೀಕ್ಷೆ

**ಈ ಪಾಠದ ವಿಷಯವು ಯಾವುದು ?**

ದಿಲೀಪನು ಯಾರು ? ಅವನಿಗೆ ಮಕ್ಕಳಿಲ್ಲದ್ದಕ್ಕೆ ಯಾವ ಸೇವೆ ಮಾಡಿದನು ? ಸೇವೆಯ ಕಾಲದಲ್ಲಿ ಎಂತಹ ತ್ಯಾಗ ಮಾಡಲು ಸಿದ್ಧನಾಗಬೇಕಾಯಿತು ? ಅದರ ಫಲವೇನು ? ಮುಂತಾಗಿ ಇಲ್ಲಿ ಹೇಳಿದೆ.

**ಈ ಪಾಠದ ಸಾರಾಂಶ**

ವೈವಸ್ವತ ಮನುವಿನ ವಂಶದಲ್ಲಿ ದಿಲೀಪನೆಂಬ ರಾಜನಾಗಿ ಹೋದನು. ಸುದಕ್ಷಿಣೆ ಅವನ ಪಟ್ಟದರಸಿ. ಆ ದಂಪತಿಗಳಿಗೆ ಪುತ್ರಸಂತಾನವಿರಲಿಲ್ಲ. ಗುರುಗಳಾದ ವಶಿಷ್ಠ ಋಷಿಗಳನ್ನು ಉಪಾಯ ಕೇಳಬೇಕೆಂದು ಅವರಲ್ಲಿಗೆ ಹೋದರು. ಆಶ್ರಮದಲ್ಲಿ ಋಷಿಗಳಿಂದ ಆತಿಥ್ಯ ನಡೆಯಿತು. ದಂಪತಿಗಳು ತಮ್ಮ ಕೊರಗನ್ನು ತಿಳಿಸಿದರು. ಹಿಂದೊಮ್ಮೆ ನೀನು ಸ್ವರ್ಗದಿಂದ ಬರುವಾಗ ಕಾಮಧೇನುವಿಗೆ ತಕ್ಕ ಗೌರವ ತೋರಿಲ್ಲ. ಅದಕ್ಕಾಗಿ ಅದು ಶಾಪ ಕೊಟ್ಟಿದೆ. ತನ್ನ ಸಂತತಿಯ ಆರಾಧನೆ ಮಾಡುವವರೆಗೆ ಮಕ್ಕಳಾಗದಿರಲಿ, ಎಂದು. ಕಾಮಧೇನುವಿನ ಕರು ನಂದಿನಿ ಇಲ್ಲಿದೆ. ಇದರ ಸೇವೆ ಮಾಡು; ನಿನ್ನ ಹಾರೈಕೆ ಈಡೇರುವುದು. ಎಂದು ವಶಿಷ್ಠನು ಹೇಳಿದನು. ಮರುದಿನದೀದ ದಿಲೀಪನು ನಂದಿನಿಯ ಸೇವಾವ್ರತವನ್ನು ಕೈಕೊಂಡನು. ಅದು ನಿಂತಲ್ಲಿ ನಿಂತು, ನಡೆದಾಗ ಹಿಂಬಾಲಿಸುತ್ತಿದ್ದ. ಸುದಕ್ಷಿಣೆಯೂ ನಂದಿನಿಯನ್ನು ಪೂಜಿಸುತ್ತಿದ್ದಳು. ಹೀಗೆ ಸೇವೆ ನಡೆದ ೨೨ ನೆಯ ದಿನ. ನಂದಿನಿಯು ಹಿಮಾಲಯದ ಗವಿಯನ್ನು ಸೇರಿತು. ಆದರ ಆಕ್ರೋಶ ಕೇಳಿತು. ದಿಲೀಪ ನೋಡುತ್ತಾನೆ. ನಂದಿನಿಯ ಮೇಲೆ ಸಿಂಹ ನೆಗೆದು ಬಂದಿದೆ. ಬಿಲ್ಲಿಗೆ ಕೈಹಾಕಲು ಎತ್ತಿದ ಕೈ ಅಲ್ಲಿಯೆ

ನಿಂತಿತು. ಸಿಂಹವು ಆಡಿದ ಮಾತನ್ನು ಕೇಳಿ ಹಸುವಿನ ಬದಲು ನನ್ನ ದೇಹವನ್ನು ಸ್ವೀಕರಿಸು ಎಂದು ದಿಲೀಪನು ಹೇಳಿದನು. ಅಲ್ಪದರ ಸಲುವಾಗಿ ಅಮೌಲಿಕವಾದುದನ್ನು ತೊರೆಯಬಹುದೆ, ಎಂದಿತು ಸಿಂಹ. ನನ್ನ ಪ್ರಾಣಕೊಟ್ಟು ಈ ಗೋವನ್ನು ರಕ್ಷಿಸುವುದು ನನಗೆ ಯೋಗ್ಯ, ಎಂದನು ದಿಲೀಪ. ಸಿಂಹವು ಒಪ್ಪಿಕೊಂಡಿತು. ದಿಲೀಪನು ಸಿಂಹದೆದುರು ಆಹುತಿಯಾಗಲು ಬಂದನು. ಆಗ ಹೂಮಳೆಯಾಯಿತು. ನಾನೇ ನಿನ್ನ ಸತ್ವಪರೀಕ್ಷೆ ಮಾಡಿದೆ ಎಂದು ನಂದಿನಿ ಹೇಳಿದಳು ನನ್ನ ಹಾಲನ್ನು ಸೇವಿಸು ನಿನ್ನ ಇಚ್ಛೆ ಕೈಗೂಡುತ್ತದೆ, ಎಂದು ನಂದಿನಿ ಹೇಳಿದಳು. ಆಶ್ರಮಕ್ಕೆ ಬಂದು ವಶಿಷ್ಠರಿಗೆ ಇದನ್ನು ತಿಳಿಸಿ ಹಾಲು ಸೇವಿಸಿ ದಂಪತಿಗಳು ರಾಜಧಾನಿಗೆ ಹೋದರು.

**ಕಠಿಣ ಶಬ್ದಗಳ ಅರ್ಥ**

ಲೋಕವಿಖ್ಯಾತ—ಜಗತ ಪ್ರಸಿದ್ಧ. ಅನುರೂಪ—ಯೋಗ್ಯ. ಸಮಿತ್ತು—ವಟುವೃಕ್ಷದಿಂದ ಬಿದ್ದ ಗಿಡದ ತುಂಡುಗಳು. ಪುನೀತ—ಪವಿತ್ರ. ಅಂತರ್‌ದೃಷ್ಟಿ—ಒಳಗಿನ ದೃಷ್ಟಿ. ಹಸುವು—ಆಕಳು. ತಲ್ಲೀನ—ತನ್ಮಯ. ಮುಕ್ಕಣ್ಣ—ಶಿವ. ಅಣಿಯಾದ—ಸಿದ್ಧನಾದ. ದಂಟ್ರ—ಹಲ್ಲು. ಹಿಂಸ್ರಪಶು—ಕ್ರೂರಪಶು. ಸತ್ವ ಪರೀಕ್ಷೆ—ಯೋಗ್ಯತಾ ಪರೀಕ್ಷೆ.

**ಕಠಿಣ ವಾಕ್ಯಗಳ ಅರ್ಥ**

೧ ಅಲ್ಪದರ ಸಲುವಾಗಿ ಅಮೌಲಿಕವಾದುದನ್ನು ತೊರೆಯಲು ಅಣಿಯಾದ ನೀನು ತಿಳಿಗೇಡಿಯೆಂದು ತೋರುತ್ತದೆ.

ಒಂದೆಡೆ ಒಂದು ಆಕಳು, ಇನ್ನೊಂದೆಡೆ ರಾಜ. ಇದು ಸಾಮಾನ್ಯವಾಗಿ ಒಂದು ಅಲ್ಪ ಇನ್ನೊಂದು ಅಮೌಲಿಕವೆಂದು ಕಾಣುತ್ತದೆ. ಆದರೆ, ಯಾವುದರ ಸೇವೆಯನ್ನು ರಾಜನು ಮಾಡುತ್ತಿರುವನೋ ಅದು ಅಲ್ಪವಾಗಲಾರದು. ಆದ್ದರಿಂದ ಸೇವೆಮಾಡುವವನು ಅಮೌಲಿಕವಾಗಲಾರನು. ಈ ಸಂಬಂಧದಿಂದ ನೋಡಿದಾಗ ರಾಜನು ತನ್ನ ದೇಹವನ್ನು ಬಲಿದಾನ ಮಾಡುವುದು ತಿಳಿಗೇಡಿತನದ ಮಾತಲ್ಲ. ರಾಜನ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ಸಿಂಹವು ಹಾಗೆ ಮಾತನಾಡಿದೆ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ದಿಲೀಪನು ತನ್ನ ಹೆಂಡತಿಯೊಡನೆ ನಂದಿನಿಯ ಸೇವೆಯಲ್ಲಿ ಏಕೆ ನಿರತನಾದನು ?

**ಉತ್ತರ :** ನಂದಿನಿಯ ತಾಯಿಯಾದ ಕಾಮಧೇನುವಿಗೆ ದಿಲೀಪನು ಹಿಂದಕ್ಕೆ ತಿಳಿಯದೆ ಅಗೌರವ ತೋರಿದ್ದನು. ಕಾಮಧೇನು ಶಾಪ ಕೊಟ್ಟದ್ದಿತು. ಆ ಶಾಪದ ಪರಿಣಾಮವಾಗಿ ಈ ದಂಪತಿಗಳಿಗೆ ಪುತ್ರಸಂತಾನವಾಗಿದ್ದಿಲ್ಲ. ವಶಿಷ್ಠರ ಆಜ್ಞಾನುಸಾರ ದಂಪತಿಗಳು ತಮಗೆ ಪುತ್ರಲಾಭವಾಗಬೇಕೆಂದು ಕಾಮಧೇನುವಿನ ಮಗಳಾದ ನಂದಿನಿಯ ಸೇವೆಯಲ್ಲಿ ನಿರತರಾಗಿದ್ದರು.

**ಪ್ರಶ್ನೆ : ೨** ನಂದಿನಿಯನ್ನು ತಿನ್ನಲು ಸಿದ್ಧವಾದ ಸಿಂಹವು ಯಾರು ?

**ಉತ್ತರ :** ನಂದಿನಿಯೇ ಸಿಂಹದ ರೂಪ ತಳೆದಿತ್ತು. ಆದರೆ ಕತೆಹೇಳುವಾಗ ಸಿಂಹವು ತನ್ನನ್ನು ಪಾರ್ವತಿಯು ಅಲ್ಲಿರುವ ದೇವದಾರು ಗಿಡವನ್ನು ಕಾಯಲು ಇಟ್ಟಿದ್ದಾಳೆ. ತಾನು ಮೂಲತಃ .ಶಂಕರನ ಸೇವಕನಾದ ಕುಂಭೋದರನು ಎಂದು ಹೇಳುತ್ತದೆ.

**ಪ್ರಶ್ನೆ : ೩** ದಿಲೀಪನು ಸಿಂಹಕ್ಕೆ ಆಹುತಿಯಾಗಲು ಸಿದ್ಧನಾದ ಕಾರಣವೇನು?

ಉತ್ತರ; ನಂದಿನಿಯ ಸೇವೆಮಾಡಲು ಬಂದವನು ತಾನು. ಅದರ ರಕ್ಷಣೆಯ ಹೊಣೆ ತನ್ನದು. ಸಿಂಹವು ತನ್ನ ಆಳವಿನಲ್ಲಿ ಬಂದ ಪಶುವನ್ನು ತಿಂದು ಹಸಿವು ಹಿಂಗಿಸಿಕೊಳ್ಳಬೇಕಾಗಿದ್ದರೆ ತನ್ನನ್ನು ತಿಂದು ನಂದಿನಿಯನ್ನು ಬಿಡಬೇಕೆಂದು ಹೇಳಿಕೊಂಡು ಆಹುತಿಯಾಗಲು ತಾನು ಸಿದ್ಧನಾದನು.

**ಪ್ರಶ್ನೆ: ೪** ಸಿಂಹವು ದಿಲೀಪನನ್ನು ತಿನ್ನಲು ಏಕೆ ನಿರಾಕರಿಸಿತು ?

ಉತ್ತರ : ಒಂದು ಸಾಮಾನ್ಯ ಆಕಳಿಗಾಗಿ ಚಕ್ರಾಧಿಪತ್ಯದ ಸಮ್ರಾಟನನ್ನು ತಿನ್ನುವುದು ತರವಲ್ಲವೆಂದು. ತಿಂದರೆ ಆಕಳನ್ನೇ ತಿನ್ನಬೇಕು. ಏಕಂದರೆ ವಶಿಷ್ಠರಲ್ಲಿ ಅನೇಕ ಆಕಳು ಇರಬಹುದು. ಮೇಲಾಗಿ ಸಮ್ರಾಟನು ನೂರಾರು ಆಕಳನ್ನು ಖುಷಿಗೆ ಕೊಡಲೂಬಹುದು. ಹೀಗೆ ವಿಚಾರಿಸಿದ ಸಿಂಹವು ದಿಲೀಪನನ್ನು ತಿನ್ನಲು ನಿರಾಕರಿಸಿತು.

**ಅಭ್ಯಾಸ : ೨** ತಿಳಿಗೇಡಿ, ನಾಚಿಕೆಗೇಡಿ, ರಣಗೇಡಿ, ಕಿಡಿಗೇಡಿ, ಕೆಲಸಗೇಡಿ, ಮುಗ್ಗಲುಗೇಡಿ, ಉಪಕಾರಗೇಡಿ.

೩. ನೀವೇ ಬರಿಯಿರಿ.

**ನೆನಪಿಗಾಗಿ :** ಅಲ್ಪದರ ಸಲುವಾಗಿ ಅಮೌಲಿಕವಾದುದನ್ನು ತೊರೆಯುವವ ತಿಳಿಗೇಡಿ.

## ೧೮ ಚೀನದ ಸಂಪ್ರದಾಯಗಳು

**ಈ ಪಾಠದ ವಿಷಯವು ಯಾವುದು ?**

ಒಂದೊಂದು ದೇಶದಲ್ಲಿ ಒಂದೊಂದು ಬಗೆಯ ಸಂಪ್ರದಾಯಗಳು ಇರುತ್ತವೆ. ಚೀನದೇಶದ ಸಂಪ್ರದಾಯಗಳು ಯಾವು ? ಅವು ಭಾರತದ ಸಂಪ್ರದಾಯಕ್ಕೆ ಹೋಲುವುವೆ ? ಎಂಬುದನ್ನು ವಿವರಿಸಲಾಗಿವೆ.

**ಈ ಪಾಠದ ಸಾರಾಂಶ**

ಚೀನವು ಭಾರತದ ಎರಡರಷ್ಟು ದೊಡ್ಡದೇಶವು. ನೆರೆಯದೇಶವಾದ್ದರಿಂದ ಚೀನ ಭಾರತಗಳಲ್ಲಿ ಬಹುಕಾಲದ ಸಂಬಂಧವಿದೆ. ಭಾರತದಿಂದ ಬೌದ್ಧಧರ್ಮ ಚೀನಕ್ಕೆ ಹೋಗಿದೆ. ಇದರಂತೆ ರೂಢಿ ಸಂಪ್ರದಾಯಗಳೂ ಹೋಗಿರಬಹುದು. ಚೀನದೇಶದಲ್ಲಿ ಗಂಡುಮಗುವಿಗೆ ಗೌರವಹೆಚ್ಚು. ಹೆಣ್ಣುಹುಟ್ಟಿದರೆ ಅಸಡ್ಡೆ ಮಾಡುವರು. ಗಂಡು ಮಗುವಿಗೆ ಹೆಸರು ಇಡುವುದೊಂದು ಹಬ್ಬ. ಅದಕ್ಕೆ ಕಾಲಕಾಲಕ್ಕೆ ಬೇರೆ ಬೇರೆ ಹೆಸರು

ಬರುವುವು. ಹುಡಿಗೆಯರಿಗೆ ಹೆಸರಿಡದೆ ಅಂಕಿಗಳಿಂದ ಗುರುತಿಸುವರು. ಗಂಡು ಮಗುವಿಗೆ ಒಂದು ವರುಷವಾದ ಕೂಡಲೆ ಚೌಲ ಮಾಡಿಸುತ್ತಾರೆ. ಹುಟ್ಟಿದ ಹಬ್ಬದ ಆಚರಣೆ ಸಂಭ್ರಮದ್ದು. ಚೀನಿ ನಮಸ್ಕಾರಕ್ಕೆ ಕೌಟೌ ಎನ್ನುತ್ತಾರೆ. ಆ ರೀತಿ ನಮಸ್ಕಾರ ಮಾಡಲು ಅನುಕೂಲವಾಗುವಂತೆ ವೇಷ. ಹೆಣ್ಣು ಹುಡಿಗೆಯ ಪಾದಗಳನ್ನು ಕಟ್ಟುತ್ತಾರೆ, ಅವು ಹೆಚ್ಚು ಬೆಳೆಯಬಾರದೆಂದು; ಇದು ಸೌಂದರ್ಯದ ಲಕ್ಷಣವಂತೆ. ಚೀನದ ಮೂಢನಂಬಿಕೆಗಳು. ವಿಚಿತ್ರವಾಗಿವೆ. ಸ್ವರ್ಗನರಕಗಳೆಂದು ಇಲ್ಲ. ಆದರೆ, ಭೂತಗಳು ಇವೆಯೆಂದು ನಂಬುವರು. ಪರ್ವತ, ನದಿ, ಕೊಳ್ಳ ಪಿತೃಗಳು ಭೂತಗಳೆಂದು ನಂಬುವರು. ಭೂತಗಳಲ್ಲಿ ಒಳ್ಳೆಯವು ಕೆಟ್ಟವು ಇವೆ. ಭೂತಗಳು ಅಂಕಡೊಂಕಾಗಿ ನಡೆವುದಿಲ್ಲವೆಂಬ ನಂಬಿಕೆಯಿದೆ, ಫೆಂಗಶುಯಿ ಒಳ್ಳೆಯ ಭೂತವು. ಈಗ ದೇಶದಲ್ಲಿ ತಿಳಿವಳಿಕೆ ಹೆಚ್ಚಾಗಿದ್ದರೂ ಮೂಢನಂಬಿಕೆ, ಭಾವಿಕತನ ಇವು ವಿಚಾರ ಶಕ್ತಿಯ ಅವಾರದಲ್ಲಿ ಬರುವುದಿಲ್ಲ. ನಂಬಿಕೆ ಎಂದ ಮೇಲೆ ಅದು ನಂಬಿಕೆಯೇ.

**ಕಠಿಣ ಶಬ್ದಗಳ ಅರ್ಥ**

ಅಸಡ್ಡೆ—ಅಸಹ್ಯ. ಕಲಂಕ—ಕಪ್ಪು. ಚೌಲ—ಜಾವುಳ. ಕುರುಹು—ಲಕ್ಷಣ; ಚಿನ್ಹ ನಭೋಮಂಡಲ—ಆಕಾಶ.

**ಪ್ರಶ್ನೆ—ಉತ್ತರ**

**ಪ್ರಶ್ನೆ** : ೧ ಗಂಡುಮಗುವಿನ ಜನನದ ವಿಷಯದಲ್ಲಿ ಭಾರತಕ್ಕೂ ಚೀನಕ್ಕೂ ಯಾವ ಸಾಮ್ಯವಿದೆ ?

**ಉತ್ತರ** : ಚೀನದೇಶದಲ್ಲಿ ಗಂಡು ಮಗುವಿಗೆ ಗೌರವ ಹೆಚ್ಚು. ಭಾರತದಲ್ಲಿಯೂ ಹಾಗೆಯೇ. ಚೀನದೇಶದಲ್ಲಿ ಗಂಡು ಹುಟ್ಟಿದರೆ ಸಂಭ್ರಮ. ಭಾರತದಲ್ಲಿಯೂ ಗಂಡು ಹುಟ್ಟಿದರೆ ಐದು ದೀಪಗಳನ್ನು ಹಚ್ಚಿ ಸಂಭ್ರಮ ಮಾಡುವರು. ಚೀನದೇಶದಲ್ಲಿ ಗಂಡು ಮಗುವಿಗೆ ಹೆಸರು ಇಡುವುದು ಒಂದು ಹಬ್ಬ. ಭಾರತದಲ್ಲಿ ನಾಮಕರಣವು ಒಂದು ವಿಶೇಷ ಸಂಸ್ಕಾರವಾಗಿದೆ. ಹೀಗೆ ಭಾರತ ಚೀನದೇಶಗಳಲ್ಲಿ ಹುಟ್ಟಿದ ಗಂಡು ಮಕ್ಕಳನ್ನು ಆದರಿಸುವುದರಲ್ಲಿ ಸಾಮ್ಯವಿದೆ.

**ಪ್ರಶ್ನೆ** : ೨ ಕೌಟೌ ವಂದನೆ ಎಂದರೇನು ?

**ಉತ್ತರ** : ಮೊಣಕಾಲೂರಿ, ಕೈಗಳನ್ನು ಬೆನ್ನು ಹಿಂದೆ ಒಯಿದು ಹಣೆಯನ್ನು ನೆಲಕ್ಕೆ ಹಚ್ಚಿ ನಮಸ್ಕಾರ ಮಾಡುವುದಕ್ಕೆ ಕೌಟೌ ಎನ್ನುತ್ತಾರೆ.

**ಪ್ರಶ್ನೆ**: ೩ ಚೀನದಲ್ಲಿ ಗಂಡು ವ್ಯಕ್ತಿಗೆ ಹುಟ್ಟಿನಿಂದ ಸಾವಿನ ವರೆಗೆ ಎಷ್ಟು ಹೆಸರುಗಳು ಬರುವುವು ?

**ಉತ್ತರ** : ಹುಟ್ಟಿದ ಕೂಡಲೆ ಒಂದು ಹೆಸರು. ಶಾಲೆಗೆ ಹೋಗುವ ವಯಸ್ಸಿಗೆ ಒಂದು ಹೆಸರು, ಹರೆಯಕ್ಕೆ ಬಂದು ದುಡಿಯಹತ್ತಲು ಇನ್ನೊಂದು ಹೆಸರು.

ಆಯುಷ್ಯದಲ್ಲಿ ಮಹಾತ್ಕಾರ್ಯ ಮಾಡಿದಾಗ ಒಂದು ಹೆಸರು. ಸತ್ತ ಮೇಲೆ ಮಗ ದೊಂದು ಹೆಸರು. ಹೀಗೆ ಐದು ಸಲ ಐದು ಬೇರೆ ಬೇರೆ ಹೆಸರುಗಳನ್ನು ಚೀನದಲ್ಲಿಯ ಗಂಡಸಿಗೆ ಇಡುವರು.

**ಪ್ರಶ್ನೆ : ೪** ಭೂತಗಳ ಬಗೆಗೆ ಚೀನದ ಜನರಲ್ಲಿ ಎಂತಹ ಕಲ್ಪನೆಗಳು ಇರುವುವು ?

**ಉತ್ತರ :** ಪರ್ವತ, ನದಿ, ಕೊಳ್ಳ, ಪೂರ್ವಜರು ಒಂದೊಂದು ಬಗೆಯ ಭೂತ ಗಳೆಂದು ತಿಳಿವರು. ಭೂತಗಳಲ್ಲಿ ಕೆಲವು ಒಳ್ಳೆಯವು ಕೆಲವು ಕೆಟ್ಟವುನೆಂದು ತಿಳಿವರು. ಭೂತಗಳು ಬಾಧೆ ಕೊಡಬಾರಸೆಂದು ಮನೆಯ ಮಾಳಿಗೆಯ ಮೇಲೆ ಚಿತ್ರ ಬರೆದು ತೂಗುಬಿಡುವರು. ಭೂತಗಳು ಆಕಡೊಂಕಾಗಿ ಬರಬಾರವೆಂದು ಬಾಗಿಲಿಗೆ ಪತನೆ ಇಳಿಬಿಡುವರು. ಫೆಂಗಶುಯಿ ಭೂತವು ಗಾಳಿನೀರುಗಳ ಪ್ರತಿನಿಧಿ ಎಂದೂ ಅದಕ್ಕೆ ರೈಲು, ತಾರಕಂಬ ಇವು ಅಡ್ಡಿಯಾಗುವುವೆಂದು ಆಗಾಗ ಅವುಗಳನ್ನು ಕಿತ್ತಿ ಹಾಕಿದ ಉದಾಹರಣೆಗಳು ಇಂದಿಗೂ ದೊರೆವುವು. ಚೀನಿಯರಲ್ಲಿ ಭೂತದ ಬಗ್ಗೆ ಹೀಗೆ ಕಲ್ಪನೆಗಳು ಇವೆ.

**ವ್ಯಾಕರಣ :** ೨ ಕೆಳಗಿನ ವಾಕ್ಯಗಳಲ್ಲಿಯ ಕರ್ತೃ ಕ್ರಿಯಾಪದಗಳ ಪುರುಷ ಲಿಂಗ ವಚನಗಳನ್ನು ಹೇಳಿರಿ.

| | | | | | | |
|---|---|---|---|---|---|---|
| ೧ | ಕರ್ತೃ : | ಆವನು | ತೃತಿಯ | ಪುರುಷ, | ಪುಲ್ಲಿಂಗ | ಏಕವಚನ. |
| | ಕ್ರಿಯಾಪದ | ನೋಡನು | ,, | ,, | ,, | ,, |
| ೨ | ಕರ್ತೃ | ಚೀನಿಮಗುವು | ,, | ,, | ,, | ,, |
| | ಕ್ರಿಯಾಪದ | ಸಲ್ಲಿಸುತ್ತದೆ | ,, | ,, | ,, | ,, |
| ೩ | ಕರ್ತೃ | ಮಕ್ಕಳು | ,, | ,, | ,, | ಬಹುವಚನ |
| | ಕ್ರಿಯಾಪದ | ಮಾಡುವರು | ,, | ,, | ,, | ,, |
| ೪ | ಕರ್ತೃ | ನಾವು | ಉತ್ತಮ | ,, | ,, | ,, |
| | ಕ್ರಿಯಾಪದ | ಕಳಿಸಿದೆವು | ,, | ,, | ,, | ,, |
| ೫ | ಕರ್ತೃ | ನೀವು | ಮಧ್ಯಮ | ,, | ,, | ,, |
| | ಕ್ರಿಯಾಪದ | ಕಳಿಸಿದಿರಿ | ,, | ,, | ,, | ,, |

(೩) ಕ್ರಿಯಾಪದಗಳು ತಪ್ಪಿವೆ; ತಿದ್ದಿರಿ.

೧. ಚೀನದ ಲಿಪಿಯು ಚಿತ್ರವಿಚಿತ್ರವಾಗಿ **ತೋರುತ್ತದೆ.** ೨. ಚೀನಿಯರ ಕಲಾಕೌಶಲ್ಯವನ್ನು ನೋಡಿ ನಾವೆಲ್ಲರೂ **ತಲೆದೂಗುತ್ತೇನೆ.** ೩. ಚಂದ್ರಶೇಖರನು ಮನೆಗೆ **ಬಂದಿದ್ದನು.** ೪. ಭಾರತದ ಪ್ರಧಾನ ಮಂತ್ರಿಗಳು ಚೀನಕ್ಕೆ ಬೆಟ್ಟಿಯನ್ನು **ಇತ್ತಿದ್ದಾರೆ.** ೫. ಚೀನದ ಪ್ರಧಾನಮಂತ್ರಿಗಳು ಭಾರತಕ್ಕೆ **ಬಂದಿದ್ದಾರೆ.**



# ೧೯ ಶ್ರೀಯುತ ಆಲೂರ ವೆಂಕಟರಾಯರ ಕರ್ನಾಟಕ ದರ್ಶನ

**ಈ ಪಾಠದ ವಿಷಯ ಯಾವುದು ?**

ಶ್ರೀ ಆಲೂರ ವೆಂಕಟರಾಯರು ಕರ್ನಾಟಕವನ್ನು ಹೇಗೆ ತಿಳಿದುಕೊಂಡರು ? ಗೋಖಲೆಯವರಿಂದ ಅವರು ಕಲಿತ ಪಾಠವಾವುದು? ಭಾರತದ ನಿಜವಾದ ಸೇವೆ ಹೇಗೆ ಮಾಡಬೇಕು ಎಂದು ವೆಂಕಟರಾಯರು ತಿಳಿದಿದ್ದಾರೆ, ಮುಂತಾಗಿ ಇಲ್ಲಿ ಹೇಳಲಾಗಿದೆ.

**ಈ ಪಾಠದ ಸಾರಾಂಶ**

ಸುಮಾರು ಅರವತ್ತು ವರುಷಗಳ ಹಿಂದಿನ ನೆನಪು. ಲೋಕಮಾನ್ಯ ತಿಲಕರ ಲೇಖನದಲ್ಲಿ ಉಜ್ವಲ ಮಂತ್ರ ಶಕ್ತಿಯಿತ್ತು. ಸಾರ್ವಜನಿಕ ಗಣೇಶೋತ್ಸವಗಳು ಇಲ್ಲಿಯೂ ನಡೆಯುತ್ತಿದ್ದುವು. ಈ ಉತ್ಸವದ ಮುಖಾಂತರವೇ ನನ್ನ ಸಾರ್ವಜನಿಕ ಜೀವನ ಅಂಕುರಿಸಿತು. ಮ್ಯಾಟ್ರಿಕ್ ಪರೀಕ್ಷೆ ಪಾಸಾಗಿ ಪುಣೆಗೆ ಹೋದೆ. ಫರ್ಗುಸನ್ ಕಾಲೇಜು ಸೇರಿದೆ. ಇಲ್ಲಿಯ ವಿದ್ಯಾರ್ಥಿಗಳನ್ನು ಬಡ ಪಾಯಿಗಳು. ಟಿನ್‌ಪಾಟ ಎಂದು ನಗೆಯಾಡುತ್ತಿದ್ದರು. ಆ ಕಾಲೇಜದ ವಾಚನಾಲಯದಲ್ಲಿ ಕನ್ನಡ ಪುಸ್ತಕಗಳೇ ಇರಲಿಲ್ಲ. ತಕರಾರು ಮಾಡಿ ೫೦ ರೂಪಾಯಿ ಬೆಲೆಯ ಪುಸ್ತಕ ತರಿಸಿದೆವು. ಇಷ್ಟು ಬೆಲೆಯಷ್ಟು ಪುಸ್ತಕಗಳೂ ಕೂಡ ಆಗ ದೊರೆಯುವುದು ಕಠಿಣವಾಯಿತು. ಮುಂಬಯಿಯಲ್ಲಿ ಎಲ್. ಎಲ್. ಬಿ ಯಲ್ಲಿದ್ದಾಗ ಪದವೀಧರ ಸಂಘದ ಪರವಾಗಿ ನಾಮದಾರ ಗೋಖಲೆಯವರ ಭಾಷಣ ಏರ್ಪಡಿಸಲಾಗಿತ್ತು. ದೇಶ ಸೇವೆ ಮಾಡಬೇಕೆನ್ನುವವರು ಸಾರ್ವಜನಿಕ ಲಾಯಬ್ರರಿಗಳಲ್ಲಿಯ ಪುಸ್ತಕಗಳ ಮೇಲಿನ ಧೂಳು ಜಾಡಿಸುವುದು ದೇಶ ಸೇವೆಯ ಪ್ರಥಮ ಪಾಠವಾಗಿದೆ, ಎಂದರು. ಆ ಮಾತುಗಳು ನನಗೆ ಮಾರ್ಗದರ್ಶನ ಮಾಡಿದವು. ಆನೆಗೊಂದಿಗೆ ಹೋದಾಗ ನನ್ನಲ್ಲಿ ಕ್ರಾಂತಿಯಾಯಿತು. ಕರ್ನಾಟಕತ್ವದ ಭಾವನೆಯು ಮೂಡಿತು. ವಿಜಯನಗರದ ಸಾಮ್ರಾಜ್ಯದ ಬಗ್ಗೆ ನನಗೆ ಇದ್ದ ಅಜ್ಞಾನ ಅಗಾಧವಾಗಿತ್ತು. ಆ ದಿನದ ಭಾವನೆಗಳು ಇಂದಿಗೂ ಕಣ್ಣು ಮುಂದೆ ಕಟ್ಟಿವೆ. ವಂಗಭಂಗ ಚಳವಳಿಯಿಂದ ಹೊಸ ಸ್ಫೂರ್ತಿ ಬಂದಿತು. ನನ್ನ ಚಟುವಟಿಕೆಗಳು ಉದ್ದೇಶವು ಕರ್ನಾಟಕದ ಮುಖಾಂತರವೇ ಭಾರತದ ಸೇವೆ ಮಾಡುವುದು ಆಗಿತ್ತು. ತಮ್ಮ ತಮ್ಮ ಪ್ರಾಂತಗಳ ಉನ್ನತಿಗಾಗಿ ದುಡಿವುದೇ ನಿಜವಾದ ಭಾರತ ಸೇವೆ. ಉಳಿದ ರೀತಿಯು ಬರಿಯೆ ಭ್ರಮೆ.

**ಕಠಿಣ ಶಬ್ದಗಳ ಅರ್ಥ**

ಅಸಿಮಿಸಿ—ಹಿಂದು ಮುಂದು ನೋಡದೆ, ನಾಮದಾರ—ಮಾನನೀಯ ಕ್ರಾಂತಿ—ಬದಲಾವಣೆ. ಇಂಬುಗೊಡು—ಅನುವುಗೊಡು. ವಂಗಭಂಗ—

ಬಂಗಾಲವನ್ನು ಇಬ್ಭಾಗ ಮಾಡಿದ್ದರು. ಅದರ ವಿರುದ್ಧ ಚಳವಳಿ. ಕರ್ನಾಟಕ ಕಾಂತರ್ಯಾಮಿ—ಕರ್ನಾಟಕದ ಒಳಗೆ ಹುದುಗಿರುವ.

**ಕಠಿಣ ವಾಕ್ಯಗಳ ಅರ್ಥ**

೧ ಪ್ರಾಂತಗಳನ್ನು ಬಿಟ್ಟು ಭಾರತವೆಂಬುದು ಬೇರೆ ಇಲ್ಲ. ಅಂಗಾಂಗಳಲ್ಲಿ ವ್ಯಾಪಿಸಿದ ಪ್ರಾಣದಂತೆ ಪ್ರಾಂತಗಳಿಲ್ಲೆಲ್ಲ ಭಾರತವು ತುಂಬಿದೆ.

ಭಾರತವೆಂಬುದು ಒಂದು ದೇಶವಾಗಿ ಭೌಗೋಲಿಕವಾಗಿ ಇದೆ. ಆದರೆ ರಾಷ್ಟ್ರದ ನಾಗರಿಕರು ಬೇರೆ ಬೇರೆ ಪ್ರಾಂತದ ಜನತೆಯಾಗಿದ್ದಾರೆ. ಅವರಿಗೆ ಅವರದೇ ಆದ ಭಾಷೆ, ಸಂಸ್ಕೃತಿ, ಸಂಪ್ರದಾಯಗಳು ಇವೆ. ಅವರು ಸಾಮೂಹಿಕವಾಗಿ ಭಾರತದ ಸಂಸ್ಕೃತಿಯ ಮಾರ್ಪಾಟಿಗೆ ಸಹಾಯ ಮಾಡಿದ್ದಾರೆ. ಆದ್ದರಿಂದ ಪ್ರತಿಯೊಂದು ಪ್ರಾಂತವು ತಾನು ಬೆಳೆಯುವುದೆಂದರೆ ಭಾರತದ ಪ್ರಗತಿ. ಒಂದು ಪ್ರಾಂತ ಸ್ವತಂತ್ರ್ಯದ ರೊಡನೆ ಸಹಕರಿಸಬೇಕೆಂಬುದನ್ನು ಮರೆಯಲಾಗದು. ಪ್ರಾಂತಗಳೆಂದರೆ ಭಾರತದ ಅಂಗಾಂಗಗಳೇ ಆಗಿವೆ ಭಾರತದ ಜೀವವು ಈ ಪ್ರಾಂತಗಳೆಂಬ ದೇಹದ ಭಾಗದಲ್ಲಿ ಹಮ್ಮಿದೆ. ಆದಕ್ಕೆ ಭಾರತ–ಪ್ರಾಂಗಳೆಂಬ ಭೇದಮಾಡದೆ, ಅವು ಒಂದೇ ದೇಹದ ಭಾಗಗಳೆಂದು ತಿಳಿಯಬೇಕು.

**ಪ್ರಶ್ನೆ—ಉತ್ತರ**

**ಪ್ರಶ್ನೆ :** ೧ ಶ್ರೀ ಆಲೂರ ವೆಂಕಟರಾಯರಲ್ಲಿ ಸಾರ್ವಜನಿಕ ಜೀವನವು ಅಂಕುರಿಸಿದ ಬಗೆ ಹೇಗೆ ?

**ಉತ್ತರ :** ವೆಂಕಟರಾಯರು ಚಿಕ್ಕವರಿದ್ದಾಗ ಲೋಕಮಾನ್ಯ ತಿಲಕರ ಪ್ರಭಾವ ವ್ಯಾಪಿಸಿತ್ತು. ಅವರು ಸಾರ್ವಜನಿಕವಾಗಿ ಗಣೇಶೋತ್ಸವಗಳನ್ನು ಆಚರಿಸುವ ಪರಿಪಾಠ ಮಹಾರಾಷ್ಟ್ರದಲ್ಲಿ ಹಾಕಿದರು. ಅದು ಕರ್ನಾಟಕದಲ್ಲಿಯೂ ಇಳಿದು ಬಂದಿತು. ಈ ಉತ್ಸವಗಳನ್ನು ಸಂಘಟನೆ ಮಾಡುವಾಗಲೇ ವೆಂಕಟರಾಯರ ಸಾರ್ವಜನಿಕ ಜೀವನವು ಅಂಕುರಿಸಿತು.

**ಪ್ರಶ್ನೆ :** ೨ ಶ್ರೀ ವೆಂಕಟರಾಯರು ಫರ್ಗ್ಯೂಸನ್ ಕಾಲೇಜ ಸೇರಿದರೇಕೆ ?

**ಉತ್ತರ :** ಆಗ ಕರ್ನಾಟಕದಲ್ಲಿ ಕಾಲೇಜುಗಳು ಇದ್ದಿಲ್ಲ. ಪುಣೆಯೇ ಸಮೀಪದ ಸ್ಥಳವು. ಅಲ್ಲಿ ಸರಕಾರಿ ಕಾಲೇಜಾದ ಡೆಕ್ಕನ ಕಾಲೇಜು. ಖಾಸಗೀ ಕಾಲೇಜಾದ ಫರ್ಗ್ಯೂಸನ್ ಕಾಲೇಜು. ಡೆಕ್ಕನ ಕಾಲೇಜು ರಾಜನಿಷ್ಠರಾದ ಸಿರಿವಂತರಿಗಾಗಿ ಇದ್ದಿತು. ರಾಷ್ಟ್ರನಿಷ್ಠರಾದ ಬಡಜನರಿಗೆ ಫರ್ಗ್ಯೂಸನ್ ಕಾಲೇಜು ಮೀಸಲಾಗಿತ್ತು. ಮೇಲಾಗಿ ತಿಲಕ ಅಗರಕರರಂತಹ ತ್ಯಾಗವೀರರು ಅಲ್ಲಿ ಇದ್ದರು. ತಿಲಕರ ಪ್ರಭಾವದಲ್ಲಿ ಬೆಳೆದ ಇವರು ಡೆಕ್ಕನ ಕಾಲೇಜದ ಪ್ರವೇಶಪತ್ರ ದೊರೆತಿದ್ದರೂ ಫರ್ಗ್ಯೂಸನ್ ಕಾಲೇಜು ಸೇರಿದರು.

**ಪ್ರಶ್ನೆ :** ೩ ಕಾಲೇಜಿನಲ್ಲಿದ್ದಾಗ ಅವರ ಮನಸ್ಸನ್ನು ನೋಯಿಸಿದ ಮಾತುಗಳಾವು ?

**ಉತ್ತರ:** ಕಾಲೇಜಿನಲ್ಲಿ ಕನ್ನಡಕ್ಕೆ ಯೋಗ್ಯ ಸ್ಥಾನವಿಲ್ಲದ್ದು ನೋಡಿ ಮನ ಕೊರಗಿತು. ವಾಚನಾಲಯಕ್ಕೆ ಕನ್ನಡ ಪುಸ್ತಕ ತರಿಸಲು ಮುಖ್ಯಾಧ್ಯಾಪಕರೆದುರು ತಕರಾರು ಮಾಡಿ ೫೦ ರೂಪಾಯಿಗಳಷ್ಟು ಕನ್ನಡ ಪುಸ್ತಕಗಳನ್ನು ತರಿಸಬೇಕೆಂದು ಅನುಮತಿ ಪಡೆದರೂ ಅಷ್ಟುಬೆಲೆಯ ಪುಸ್ತಕಗಳು ಕೂಡ ಸಿಕ್ಕುವುದು ಆಗ ಕಠಿಣವಿತ್ತು. ಇದನ್ನೆಲ್ಲ ನೋಡಿ ಅವರ ಮನಸ್ಸು ನೊಂದಿತು.

**ಪ್ರಶ್ನೆ :** ೪ ಗೋಖಲೆಯವರಿಂದ ಕಲಿತ ಪ್ರಥಮ ಪಾಠವಾವುದು ?

ಉತ್ತರ : ದೇಶಸೇವೆಗೆ ಜ್ಞಾನ ಅವಶ್ಯ. ಜನರು ತಿಳಿವುಳ್ಳವರಾಗಬೇಕಾದರೆ ಲಾಯಬ್ರರಿಗಳ ಸದುಪಯೋಗವಾಗಬೇಕು. ಸಾರ್ವಜನಿಕ ವಾಚನಾಲಯಗಳು ಅಲಕ್ಷಿಸಲ್ಪಟ್ಟಿದ್ದುವು. ಅಲ್ಲಿಯ ಧೂಳು ಜಾಡಿಸುವುದೇ ಪ್ರಥಮಪಾಠವೆಂದು ಗೋಖಲೆ ಅಂದಿದ್ದರು. ಅದು ವೆಂಕಟರಾಯರ ಮನ ಹಿಡಿಯಿತು.

**ಪ್ರಶ್ನೆ : ೫** ಆನೆಗೊಂದಿಯ ದರ್ಶನವು ಶ್ರೀ ವೆಂಕಟರಾಯರ ಜೀವನದಲ್ಲಿ ಕ್ರಾಂತಿಯನ್ನು ಹೇಗೆ ಉಂಟುಮಾಡಿತು.

**ಉತ್ತರ :** ಆನೇಗೊಂದಿಯ ವಿಜಯನಗರ ಸಾಮ್ರಾಜ್ಯದ ದರ್ಶನ ಮಾಡಿಸಿತು. ಕನ್ನಡಿಗರ ನಿಜವಾದ ಸತ್ವ ತೋರಿತು. ಕರ್ನಾಟಕತ್ವದ ದಿವ್ಯ ದರ್ಶನ ಮಾಡಿಸಿತು. ಅಂದೇ ಹೊಸ ಕರ್ನಾಟಕದ ಉದಯದ ದಿನ.

**ಪ್ರಶ್ನೆ : ೬** ಶ್ರೀ ವೆಂಕಟರಾಯರ ಅಭಿಪ್ರಾಯದಲ್ಲಿ ಭಾರತದ ಸೇವೆಯ ನಿಜವಾದ ಮಾರ್ಗವಾವುದು.

ಉತ್ತರ : ಕರ್ನಾಟಕದ ಮುಖಾಂತರವಾಗಿ ಭಾರತದ ಸೇವೆ ಸಲ್ಲಿಸಬೇಕು. ಪ್ರಾಂತಗಳನ್ನು ಬಿಟ್ಟು ಭಾರತವೆಂಬುದು ಬೇರೆ ಇಲ್ಲ. ಅಂಗಾಂಗಗಳಲ್ಲಿ ವ್ಯಾಪಿಸಿದ ಪ್ರಾಣದಂತೆ ಪ್ರಾಂತಗಳಲ್ಲೆಲ್ಲ ಭಾರತ ತುಂಬಿದೆ. ಇಡಿಭಾರತದ ದೃಷ್ಟಿಯನ್ನಿಟ್ಟುಕೊಂಡು ನೆರೆಹೊರೆಯ ಪ್ರಾಂತಗಳೊಡನೆ ಸಹಕರಿಸಿ ತಮ್ಮ ತಮ್ಮ ಪ್ರಾಂತಗಳ ಉನ್ನತಿಗಾಗಿ ದುಡಿಯುವುದೇ ನಿಜವಾದ ಭಾರತದ ಸೇವೆ, ಎಂದು ನನ್ನ ಶ್ರದ್ಧೆ, ಎಂಬುದು ಶ್ರೀ ವೆಂಕಟರಾಯರ ಅಭಿಪ್ರಾಯ.

**ಅಭ್ಯಾಸ :** ೧ ಇನ್ನೊಬ್ಬರ ಅಭಿಪ್ರಾಯಕ್ಕೆ ಮನ್ನಣೆ ಕೊಡುವುದೆಂದರೆ ಸಹಜೀವನಕ್ಕೆ **ಇಂಬುಗೊಟ್ಟಂತೆ**. ಭಾರತದ ಪಾರತಂತ್ರ್ಯವನ್ನು ನೆನೆದು ವಿವೇಕಾನಂದರ **ಮನಕೊರಗಿತು**. ಸಮುದ್ರದ ಒಳಗೆ ಭೂಕಂಪವಾದರೆ ನೀರು **ಅಲ್ಲೋಲಕಲ್ಲೋಲ**ವಾಗುವುದು. ಹಂಪೆಯ ದರ್ಶನದಿಂದ ವಿಜಯನಗರ ಸಾಮ್ರಾಜ್ಯದ ವೈಭವವು **ಕಣ್ಣುಮುಂದೆ** ಕಟ್ಟಿದಂತಾಗುವುದು. ಗುರುಗಳ ಮಾತು ವಿದ್ಯಾರ್ಥಿಗಳ ಮನದಲ್ಲಿ **ನಾಟಿನಿಲ್ಲುವುದು.**

**ನೆನ**ಸಿಗಾಗಿ : ೧ ಪ್ರಾಂತಗಳನ್ನು ಬಿಟ್ಟು ಭಾರತವೆಂಬುದು ಬೇರೆ ಇಲ್ಲ.



# ೨೦ ಮಾಂಸಾಹಾರಿ ವನಸ್ಪತಿಗಳು

**ಈ ಪಾಠದ ವಿಷಯವು ಯಾವುದು ?**

ಸಸ್ಯಗಳು ಮಾಂಸಾಹಾರಿ ಹೇಗೆ ಆಗುವುವು? ಇದೊಂದು ನಿಸರ್ಗದ ವೈಚಿತ್ರ್ಯ ವಾಗಿದೆ. ಅವು ಆಹಾರವನ್ನು ಹೇಗೆ ತೆಗೆದುಕೊಳ್ಳುವುವು, ಮುಂತಾಗಿ ಹೇಳಿದೆ.

**ಈ ಪಾಠದ ಸಾರಾಂಶ**

ಸಸ್ಯಗಳು ಮಾಂಸವನ್ನು ತಿನ್ನುತ್ತವೆಂದರೆ ನೀವು ನಂಬಲಾರಿರಿ. ಕೆಲವು ಗಿಡಗಳು ಹುಳಹುಪ್ಪಡಿಗಳನ್ನು ತಿಂದು ಜೀವಿಸುವುವು. ಬುಡ್ಡಿಕಾಯಿಗಿಡ ವೆಂಬುದೊಂದು ಜಾತಿಯ ಗಿಡ. ಹುಳಗಳು ಬುಡ್ಡಿಯ ಹತ್ತಿರ ಬಂದಕೂಡಲೆ ಒಳಗಿನ ಮಕರಂದದಿಂದ ಆಕರ್ಷಿಸಲ್ಪಡುವುವು. ಒಳಗೆ ಹೋದರೆ ಬುಡ್ಡಿಯು ಬಾಯಿ ಮುಚ್ಚಿಕೊಳ್ಳುವುದು. ಇನ್ನೊಂದು ಗಿಂಡಿಗಿಡವು. ಹುಳುಬಂದಾಗ ಈ ಗಿಂಡಿಯು ಬಾಯಿ ಮುಚ್ಚಿಕೊಂಡು ಹುಳವನ್ನು ಕೊಂದು ರಸಹೀರುವುದು. ಉತ್ತರ ಅಮೇರಿಕೆಯಲ್ಲಿ ಮುಟ್ಟಲ ಮುರಕಿ ಸ್ವಭಾವದ ಒಂದು ಗಿಡವಿದೆ. ಅದಕ್ಕೆ ನೊಣಬಲೆ ಗಿಡವೆನ್ನುವರು. ಇದರ ಎಲೆಗಳು ತೆರೆದ ಪುಸ್ತಕದಂತೆ ಇರುವುವು. ಕ್ರಿಮಿಕೀಟಗಳ ಸಂಪರ್ಕವಾದ ಕೂಡಲೆ ಈ ಎಲೆಗಳು ಪುಸ್ತಕದಂತೆ ಮುಚ್ಚಿಕೊಳ್ಳುವುವು. ಕ್ರಿಮಿಕೀಟಗಳು ಹೊರಗೆ ಬರಲು ಮಾರ್ಗವಿಲ್ಲದಾಗುವುದು. ಹಿಮದೆಲೆಯ ಗಿಡವೆಂದು ಇನ್ನೊಂದು ಜಾತಿಯ ಗಿಡವಿರುವುದು. ಈ ಗಿಡವು ಪೋರ್ತುಗಾಲದಲ್ಲಿ ಬೆಳೆವುದು. ಇಂತಹ ಮಾಂಸಾಹಾರಿ ಗಿಡಗಳು ಸುಮಾರು ನಾಲ್ಕುನೂರು ಪ್ರಕಾರದವು ಇವೆ.

**ಕಠಿಣ ಶಬ್ದಗಳ ಅರ್ಥ**

ಜವುಳು—ನೀರು ಸದಾಕಾಲ ನಿಂತು ಮಲೆತ ಪ್ರದೇಶ. ಮಕರಂದ—ಹೂವಿನಲ್ಲಿಯ ಮಧುರ ರಸ. ಸ್ರವಿಸು—ಒಸರು; ಬೆಮರು ಬಂದ ಹಾಗೆ ಆಗು.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಬುಡ್ಡಿಕಾಯಿ ಗಿಡವು ಬೇಟೆಯನ್ನು ಹೇಗೆ ಹಿಡಿವುದು ?

**ಉತ್ತರ :** ಹುಳಗಳು ಬುಡ್ಡಿಯ ಸಮೀಪಕ್ಕೆ ಬಂದಾಗ ಬುಡ್ಡಿಯು ಬಹು ವಿನಯದಿಂದ ಬಾಗಿ ಸ್ವಾಗತಿಸುವುದು. ಬುಡ್ಡಿಯೊಳಗಿನ ಮಕರಂದಕ್ಕೆ ಮರುಳಾಗಿ ಹುಳಗಳು ಒಳಗೆ ಹೋಗುವುವು. ಆಗ ಬುಡ್ಡಿಯು ಬಾಗಿಲು ಮುಚ್ಚಿಕೊಳ್ಳುವುದು. ಬುಡ್ಡಿಯಲ್ಲಿ ನೀರು ತುಂಬಿರುವುದು. ಹೀಗಾಗಿ ಬೇಟೆ ಒಳಗೆ ಸಿಕ್ಕುಬಿಡುವುದು.

**ಪ್ರಶ್ನೆ : ೨** ನೊಣಬಲೆಯ ಗಿಡದ ಸ್ವಭಾವವೇನು ?

**ಉತ್ತರ :** ಈ ಗಿಡ ಎಲೆಗಳು ತೆರೆದ ಪುಸ್ತಕದಂತೆ ಇರುವುವು. ಆ ಎಲೆಯ ಮೇಲೆ ನೊಣ ಕ್ರಿಮಿಕೀಟ ಕೂತ ಕೂಡಲೇ ಆ ಸ್ಪರ್ಶದಿಂದ ಎಲೆಗಳು ಮುಚ್ಚಿಕೊಳ್ಳುವುವು. ಎಲೆಯ ಅಂಚಿಗೆ ಕರಗಸದಂತೆ ಇರುವ ಮುಳ್ಳುಗಳು ಭದ್ರವಾಗಿ ಹಿಡಿದು

ಕೊಂಡು ಒಳಗಿನ ಹುಳು ಹೊರಬರದಂತೆ ಆಗುವುದು. ಇದು ನೊಣಬಲೆಯ ಗಿಡದ ಸ್ವಭಾವ.

**ಪ್ರಶ್ನೆ :** ೩ ಹಿಮ ಗಿಡದ ಎಲೆಯ ಮೇಲೆ ಕ್ರಿಮಿಗಳು ಹೇಗೆ ಸಾಯುವುವು?

**ಉತ್ತರ :** ಈ ಗಿಡದ ಎಲೆಯ ಮೇಲೆ ಮಂಜಿನ ಹನಿಯಂತೆ ಒಂದು ಬಗೆಯ ಗುಳ್ಳೆಯು ಇರುವುದು. ಕ್ರಿಮಿಗಳು ಇದನ್ನು ಮಧುವೆಂದು ನಂಬಿ ನೆಕ್ಕಲು ಬರುವುವು. ಆಗ ಎಲೆಗಳು ಜಿಗುಟ ರಸವನ್ನು ಒಸರುವುವು. ಕ್ರಿಮಿಗಳ ಕೈಕಾಲು ಅಂಟುವುವು. ಅವು ಅಲ್ಲಿಯೆ ಪ್ರಾಣಬಿಟ್ಟು ಗಿಡಕ್ಕೆ ಆಹಾರವಾಗುವುವು.

**ಪ್ರಬಂಧ :** ೧. ಶುದ್ಧಲೇಖನ : ತಿದ್ದಿ ಬರೆಯಿರಿ.

ಒಮ್ಮೆ ಒಬ್ಬ ರಾಜನು ಧೀರತನದಿಂದ ಬಹು ದಿನಗಳ ವರೆಗೆ ವೈರಿಗಳ ಒಂದು ಪಟ್ಟಣಕ್ಕೆ ಮುತ್ತಿಗೆ ಹಾಕಿದನು. ಪ ಟ್ಟ ಣ ಗ ರು ಪ್ರಾ ಣ ದ ಹಂಗು ತೊರೆದು ಕಾದಾಡಿದರು. ಕೊನೆಗೆ ತಮ್ಮ ಸೋಲನ್ನು ಒಪ್ಪಿಕೊಳ್ಳಬೇಕಾಯಿತು. ಪಟ್ಟಣವು ಕೈವಶವಾದ ಕೂಡಲೆ ರಾಜನು ಊರಿನ ಹೆಂಗಸರೆಲ್ಲರು ತಮ್ಮ ತಮ್ಮ ಅವಮೌಲ್ಯ ರತ್ನಾ ಭರಣಗಳನ್ನು ತೆಗೆದುಕೊಂಡು ಪಟ್ಟಣವನ್ನು ತ್ಯಾಗ ಮಾಡಿ ಹೋಗ ಬಹುದೆಂದು ಡಂಗುರ ಹೊಯಿಸಿದನು.

೨. ಶುದ್ಧವಾಗಿ ಬರೆಯಿರಿ : ಆಯುಷ್ಯವನ್ನು ಪಾಶ್ಚಾತ್ಯರು, ಸೈರಂಧ್ರಿ, ಸೀಮೋಲ್ಲಂಘನ, ಯಕ್ಷ ಪ್ರಶ್ನೆ, ಭಾಷಣ



## ೨೧ ದೀನ ಬಂಧು ಚಾರ್ಲಿ ಆಂಡ್ರೂಜ

**ಈ ಪಾಠದ ವಿಷಯವು ಯಾವುದು ?**

ಆಂಡ್ರೂಜರು ಯಾರು ? ಯಾವ ದೇಶದವರು ? ಭಾರತದಲ್ಲಿ ಯಾವ ಕೆಲಸ ಮಾಡಿದರು ? ದೀನ ಬಂಧು ಎಂಬ ಹೆಸರು ಹೇಗೆ ಬಂದಿತು, ಮುಂತಾಗಿ ಹೇಳಿದೆ.

**ಈ ಪಾಠದ ಸಾರಾಂಶ**

ನಾನು ಶಾಂತಿನಿಕೇತನಕ್ಕೆ ಹೋಗಿ ನಾಲ್ಕು ತಿಂಗಳು ಆಗಿರಲಿಲ್ಲ. ತಂದೆ ಪತ್ರ ಬರೆದು ಮರಳಿ ಬಂದು ಬಿಡಬೇಕೆಂದು ಆಜ್ಞಾಪಿಸಿದ್ದರು. ಹಿಂದಿರುಗಲು ನನ್ನ ಮನ ಸ್ಸಿರಲಿಲ್ಲ. ಆಂಡ್ರೂಜರನ್ನು ಕಂಡೆನು. ತಂದೆಯವರ ಮನ ಒಲಿಸಲು ಪ್ರಯತ್ನಿಸಿರಿ. ಅದು ಸಾಧ್ಯವಾಗದಾದರೆ ನಿಮ್ಮ ಶಿಕ್ಷಣಕ್ಕೆ ನಾನು ಹಣ ಕೊಡುವೆ, ಎಂದರು ಆಂಡ್ರೂಜ. ಆಂಡ್ರೂಜರು ಸಂಕಟದಲ್ಲಿದ್ದವರಿಗೆ ಸಹಾನುಭೂತಿ ತೋರಿಸಿ ಧೈರ್ಯ ಕೊಡುತ್ತಿದ್ದರು. ಬಡವರಿಗೆ ಸಹಾಯ ಮಾಡಲು ತಾವು ಪುಸ್ತಕ ಬರೆದು ಹಣ ಗಳಿಸುತ್ತಿದ್ದರು. ಆಂಡ್ರೂಜರು ಇಂಗ್ಲಂಡಿನವರು, ಕೇಂಬ್ರಿಜ ಪದವೀಧರರು ೧೯೧೨ ರಲ್ಲಿ ರವೀಂದ್ರರು ಇಂಗ್ಲಂಡಿಗೆ ಹೋದಾಗ ಆಂಡ್ರೂಜರು ರವೀಂದ್ರರ ಪರಿಚಯ ಮಾಡಿಕೊಂಡರು. ರವೀಂದ್ರರನ್ನು ಅವರು ಯಾವಾಗಲೂ ಗುರುದೇವ ಎಂದು ಸಂಭೋಧಿ

ಸುತ್ತಿದ್ದರು. ಭಾರತಕ್ಕೆ ಬಂದು ಶಾಂತಿನಿಕೇತನದ ಆಶ್ರಮ ಜೀವಿಗಳಾದರು. ಗಾಂಧೀಜಿ ದಕ್ಷಿಣ ಆಫ್ರಿಕೆಯಲ್ಲಿ ಸತ್ಯಾಗ್ರಹ ನಡೆಸಿದಾಗ ಅವರ ಸಹಾಯಕ್ಕೆಂದು ಗೋಖಲೆಯವರು ಆಂಡ್ರೂಜರನ್ನು ಕಳಿಸಿ ಕೊಟ್ಟರು. ಗಾಂಧೀ ಅಂಡ್ರೂಜರ ಸ್ನೇಹ ಗಾಢವಾಯಿತು. ಆಂಡ್ರೂಜರು ಭಾರತವನ್ನೇ ತಮ್ಮ ದೇಶವನ್ನಾಗಿ ಮಾಡಿ ಕೊಂಡಿದ್ದರು. ಒಂದು ಮಧ್ಯಾಹ್ನ ಅವರು ನನ್ನ ಕೋಣೆಗೆ ಬಂದರು. ನನಗೆ ಹಸಿವಾಗಿದೆ. ಏನಾದರೂ ತಿನ್ನಲು ಕೊಡು ಎಂದರು. ತಿನಸು ಕೊಟ್ಟು ಚಹಾ ಮಾಡಿಕೊಟ್ಟೆ. ಅಲ್ಲಿಂದ ಹೊರಡುವಾಗ ಅವರು ಹಾಕಿ ಕೊಂಡ ಅಂಗಿಯು ತಿರು ಮುರುವು ಆಗಿದ್ದು ತಿಳಿಸಿದೆ. ಅಹುದು ನಾನು ನೋಡಿರಲ್ಲಿಲ್ಲ. ಟಿಕೀಟಿಗೆ ಹಣ ಕೊಡುವಾಗ ಕೈ ಒಳಗೆ ಹಾಕಿ ಹಣ ತೆಗೆದೆ. ಎಂದು ನಗುತ್ತ ಹೇಳಿ ಹೊರಟು ಹೋದರು.

**ಕಠಿಣ ಶಬ್ದಗಳ ಅರ್ಥ**

ಆದೇಶ—ಆಜ್ಞೆಸಹಿತವಾಗಿರುವ ಸೂಚನೆ ಸಂಬೋಧಿಸು—ಕರೆ. ಪ್ರತಿಭಟಿಸು—ಎದುರಿಸು. ಅಪೂರ್ವ—ಹಿಂದೆ ಆಗದ. ಅಡಿಗೆರಗು—ನಮಸ್ಕಾರ ಮಾಡು. ಗಮನಕ್ಕೆ—ಲಕ್ಷ್ಯಕ್ಕೆ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಆಂಡ್ರೂಜರು ಬಡವಿದ್ಯಾರ್ಥಿಗಳಿಗೆ ಹೇಗೆ ನೆರವಾಗುತ್ತಿದ್ದರು ?

**ಉತ್ತರ :** ಸಹಾನುಭೂತಿ ತೋರುತ್ತಿದ್ದರು; ಧೈರ್ಯ ಕೊಡುತ್ತಿದ್ದರು. ಕೈಯತ್ತಿ ಹಣವನ್ನು ಕೊಡುತ್ತಿದ್ದರು. ಹೀಗೆ ಆಂಡ್ರೂಜರು ಬಡವಿದ್ಯಾರ್ಥಿಗಳಿಗೆ ನೆರವಾಗುತ್ತಿದ್ದರು.

**ಪ್ರಶ್ನೆ : ೨** ರವೀಂದ್ರರಿಗೂ ಆಂಡ್ರೂಜರಿಗೂ ಪ್ರಥಮ ಪರಿಚಯ ಹೇಗೆ ಆಯಿತು ?

**ಉತ್ತರ :** ೧೯೧೨ರಲ್ಲಿ ರವೀಂದ್ರರು ಇಂಗ್ಲಂಡಕ್ಕೆ ಹೋಗಿದ್ದರು. ಅಲ್ಲಿ ಅವರ ಗೀತಾಂಜಲಿ ಕಾವ್ಯವಾಚನ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಇಂಗ್ಲಂಡಿನ ಕವಿಗಳು, ರಸಿಕರು, ಲೇಖಕರು ಕಾರ್ಯಕ್ರಮಕ್ಕೆ ಬಂದಿದ್ದರು. ತರುಣ ಕವಿಗಳಾದ ಆಂಡ್ರೂಜರೂ ಬಂದಿದ್ದರು. ರವೀಂದ್ರರ ಕವನಗಳನ್ನು ಕೇಳಿ ಆಂಡ್ರೂಜರು ಮುಗ್ಧರಾದರು. ಅಂದೆ ರವೀಂದ್ರರ ಪರಿಚಯವಾಯಿತು.

**ಪ್ರಶ್ನೆ : ೩** ಆಂಡ್ರೂಜರು ದಕ್ಷಿಣ ಆಫ್ರಿಕೆಗೆ ಏಕೆ ಹೋದರು ?

**ಉತ್ತರ :** ದಕ್ಷಿಣ ಆಫ್ರಿಕೆಯಲ್ಲಿ ಗಾಂಧೀಜಿ ಇದ್ದರು ಅಲ್ಲಿಯ ಬಡಕೂಲಿಕಾರರಿಗೆ ಆಗುತ್ತಿದ್ದ ಅನ್ಯಾಯವನ್ನು ತೊಡೆದುಹಾಕುವುದಕ್ಕೆ ಗಾಂಧೀಜಿ ಸತ್ಯಾಗ್ರಹ ಹೂಡಿದ್ದರು. ಗಾಂಧೀಜಿಯ ಸಹಾಯಕ್ಕೆಂದು ಶ್ರೀಗೋಖಲೆಯವರು ಆಂಡ್ರೂಜರನ್ನು ದಕ್ಷಿಣಆಫ್ರಿಕೆಗೆ ಕಳಿಸಿಕೊಟ್ಟರು. ಆದಕ್ಕಾಗಿ ಆಂಡ್ರೂಜರು ದಕ್ಷಿಣ ಆಫ್ರಿಕೆಗೆ ಹೋದರು.

**ಪ್ರಶ್ನೆ : ೪** ಭಾರತಕ್ಕೆ ಆಂಡ್ರೂಜರು ಸಲ್ಲಿಸಿದ ಸೇವೆಯಾವುದು ?

**ಉತ್ತರ:** ಭಾರತೀಯರ ಬಗ್ಗೆ ಪರದೇಶಗಳಲ್ಲಿ ಆಗ ಇದ್ದ ತಪ್ಪುಕಲ್ಪನೆಯನ್ನು ದೂರು ಮಾಡಲು ಬಹಳ ಪ್ರಯತ್ನಪಟ್ಟರು ಆಂಡ್ರೂಜರು. ಇಲ್ಲಿಯ ಜನತೆಗೆ ನೆರವಾಗುತ್ತಿದ್ದರು. ಹೀಗೆ ಭಾರತಕ್ಕೆ ಆಂಡ್ರೂಜರು ಸೇವೆಸಲ್ಲಿಸಿದ್ದಾರೆ.

**ವ್ಯಾಕರಣ:** ೩. ಕೆಳಗಿನ ಶಬ್ದಗಳನ್ನು ಕೂಡಿಸಿ ಬರೆಯಿರಿ. ಅಲ್ಲಿ ಆಗುವ ಸಂಧಿಕಾರ್ಯವೇನೆಂಬುದನ್ನು ಹೇಳಿರಿ. ನಾನು + ಇನ್ನು—ನಾನಿನ್ನು : ಉಕಾರ ಲೋಪವಾಯಿತು. ತಪ್ಪಿದಂತೆ + ಆಯಿತು—ತಪ್ಪಿದಂತಾಯಿತು. ಎಕಾರ ಲೋಪವಾಯಿತು. ಕೈ + ಎತ್ತಿ—ಕೈಯೆತ್ತಿ ಯಕಾರ. ಬಂತು. ಕಣ್+ತೆರೆದು—ಕಂದೆರೆದು. ತದಬದಲು ದ ಬಂದಿತು. ಗಂಟೆ + ಆಗಿರಬಹುದು—ಗಂಟೆಯಾಗಿರಬಹುದು. ಯಕಾರ ಬಂತು. ಕಾಲ್+ತೆಗೆ—ಕಾಲ್ದೆಗೆ—ತದ ಬದಲು ದ ಬಂತು.



## ೨೨ ರವಿಕಿರಣ

**ಈ ಪಾಠದ ವಿಷಯವು ಯಾವುದು ?**

ಹುಡುಗನು ಹಾಳೆ ಹಡಗ ಮಾಡಿ ನೀರಲ್ಲಿ ಬಿಡುವಾಗ ಎಷ್ಟು ದೂರ ಅದು ಹೋಗುವುದೆಂದು ತಿಳಿಯುವನು ? ಅಟ್ಟಂ ಬಟ್ಟಂ ಆರಣ್ಯ, ಎಲ್ಲಿದೆ ? ಹನ್ನೆರಡು ಗಂಟೆ ಯಾವಾಗ ಹೊಡೆಯುತ್ತದೆ ? ಮಗುವಿನ ವಿಚಾರ ಲಹರಿಗಳು ಇವು. ಮಗುವಿಗಾಗಿ ವಿಚಾರಿಸಿದಾಗ ಇದರ ಸೊಬಗು ತಿಳಿವುದು.

**ಈ ಪಾಠದ ಸಾರಾಂಶ**

೧ ಹಾಳೆ ಹಡಗಗಳನ್ನು ಹೊಳೆಯಲ್ಲಿ ತೇಲಿಬಿಡುವೆ. ನನ್ನ ಹೆಸರು ಹಡಗಗಳಿಗೆ ಅಂಟಿಸುವೆ. ಈ ಹಡಗಗಳು ಮುಟ್ಟಿದ ಸ್ಥಳದವರಿಗೆ ಎಲ್ಲಿಂದ ಬಂದವು ಎಂಬುದು ಗೊತ್ತಾಗುವುದು ನಮ್ಮ ತೋಟದಲ್ಲಿಯ ಮಲ್ಲಿಗೆ ಬಕುಲ ಹೂಗಳನ್ನು ತಂದು ಹಡಗಗಳಲ್ಲಿ ತುಂಬುವೆ. ಈ ಹೂಗಳು ಆಚೆ ದಡ ಸೇರುವುವು. ನನ್ನ ಹಡಗಗಳೂ ಮೋಡಗಳೂ ನಾ ಮುಂದೆ ನೀ ಮುಂದೆ ಎಂದು ಸ್ಪರ್ಧೆನಡಸುವುವು ಮೋಡಗಳು ಹೊಸ ದೇಶಗಳಿಗೆ ಹೋಗುವುವು. ಧಾವಿಸುವ ಹಡಗಗಳೊಡನೆ ನನ್ನ ಮನಸ್ಸೂ ತೇಲುತ್ತ ತೇಲುತ್ತ ಹೋಗಿ ಅವುಗಳನ್ನು ಏರಿಕುಳಿತುಕೊಳ್ಳುವುದು. ರಾತ್ರಿ ಹಾಸಿಗೆಯಲ್ಲಿ ಮಲಗಿಕೊಳ್ಳುವೆ. ನದಿಯ ದಂಡೆಯ ಮೇಲೆ ಅಂಧಕಾರ. ಇಂತಹ ಕತ್ತಲೆಯಲ್ಲಿ ನನ್ನ ಹಡಗಗಳು ಎಲ್ಲಿ ಹೋಗುವುವೊ. ನನ್ನ ಹಡಗಗಳು ತಮ್ಮ ಗುರಿಯನ್ನು ಹುಡುಕುತ್ತ ತೇಲುತ್ತ ಸಾಗುವುವು. ನಿದ್ರಾದೇವತೆಗಳು ತಾವು ಸಹ ಹತ್ತಿರ ಕುಳಿತು ತೇಲುತ್ತಿರುವರು.

೨ ಇಂದು ಶನಿವಾರ ಸೂಟಿ. ಮನಸ್ಸಿಗೆ ಬೇಸರ. ಅಮ್ಮಾ ನಿನ್ನ ಕಥೆಯಲ್ಲಿ ಬರುವ ಅಟ್ಟಂಬಟ್ಟಂ ಆರಣ್ಯ ಎಲ್ಲಿದೆ ಹೇಳಮ್ಮಾ. ಮಳೆ ಬೀಳುತ್ತದೆ. ಗುಡುಗು ಮಿಂಚು, ಚಳಿ. ಬೆಚ್ಚಗೆ ಕೂತು ಕಥೆ ಕೇಳಬೇಕೆನ್ನಿಸುತ್ತದೆ. ಅಟ್ಟಂ ಬಟ್ಟಂ ಆರಣ್ಯ

ಎಲ್ಲಿದೆ ಹೇಳಮ್ಮ. ಸಮುದ್ರದ ದಂಡೆಗೆ ಇದೆಯೆ ? ಗುಡ್ಡದ ತುದಿಗೆ ಇದೆಯೆ ? ಅಲ್ಲಿಗೆ ಹೋಗುವ ದಾರಿ ಯಾವುದು ? ಅಲ್ಲಿರುವ ಒಂದೇ ಒಂದು ಗಿಡದ ಮೇಲೆ ಒಂದು ಗಂಡು ಒಂದು ಹೆಣ್ಣು ಹಕ್ಕಿ ಕೂತಿಲ್ಲವೆ ? ಸುತ್ತಲೂ ಹುಲ್ಲು ಬೆಳೆದಿದೆ. ಆ ಗಿಡದ ಕಟ್ಟಿಗೆ ಯಾರು ತಂದಾರು. ರಾಜಪುತ್ರ ಕುದುರೆಯ ಮೇಲೆ ಹೊರಟಿದ್ದಾನೆ. ಸೆರೆಸಿಕ್ಕ ರಾಜಕನ್ನಿಕೆಯನ್ನು ಬಿಡಿಸಲು ಹೊರಟಿದ್ದಾನೆ. ಇನ್ನೂ ಹಗಲಿದ್ದರೂ ಕತ್ತಲೆಯಾಗಿದೆ. ಓದು ಬರೆ ಎಂದು ಮಾತ್ರ ಹೇಳಬೇಡಮ್ಮ. ಅಪ್ಪನಷ್ಟು ದೊಡ್ಡವನಾದ ಮೇಲೆ ಮೊದಲನೆಯ ಪಾಠ ಓದುವೆ. ಆ ಅಟ್ಟಂ ಬಟ್ಟಂ ಅರಣ್ಯ ಎಲ್ಲಿದೆ ಹೇಳಿಬಿಡಮ್ಮ.

೩. ಬೆಳಗಿನಿಂದ ಓದುತ್ತಿದ್ದೇನೆ. ಸೂಟಿಕೊಡಲು ಹೇಳು. ಈಗ ಹನ್ನೆರಡು ಹೊಡೆದಿದೆ ಅನ್ನುವಿ. ಹನ್ನೆರಡು ಹೊಡೆದಾಗಲೇ ಹನ್ನೆರಡು ಹೊಡೆದಿರುವುದು. ಸಂಜೆಯ ಸೂಟಿ ಈಗಲೇ ಏಕಾಗಬಾರದು. ಸಂಜೆ ಆಗಿಯೆ ಬಿಟ್ಟಿತು ಎಂದು ಏಕೆ ತಿಳಿಯಬಾರದು ? ರಾತ್ರಿಯಲ್ಲಿ ಹನ್ನೆರಡು ಹೊಡೆಯುತ್ತದೆ. ಹನ್ನೆರಡು ಹೊಡೆದಾಗ ರಾತ್ರಿ ಏಕೆ ಆಗಬಾರದು ?

**ಕಠಿಣ ಶಬ್ದಗಳ ಅರ್ಥ**

ಜತನದಿಂದ—ಕಾಳಜಿಯಿಂದ. ನಳನಳಿಸುವ—ಅರಳಿನಗುವ; ಹೊಳೆಯುವ ಗಗನ—ಆಕಾಶ. ಸ್ಪರ್ಧೆ—ಏರಾಟ. ಧಾವಿಸು—ಓಡಿಹೋಗು. ಗಾಂಢಾಂಧಕಾರ—ಕಗ್ಗತ್ತಲೆ ಆಣಿಮುತ್ತು—ಬೆಲೆಯುಳ್ಳ ಮುತ್ತು.

**ಪ್ರಶ್ನೆ-ಉತ್ತರ**

೧

**ಪ್ರಶ್ನೆ : ೧** ಬಾಲಕನು ಹಾಳಿಯ ಹಡಗಗಳ ಅಲಂಕಾರ ಹೇಗೆ ಮಾಡುವನು?

**ಉತ್ತರ :** ಹಾಳಿ ಹಡಗ ಮಾಡಿ ಅದಕ್ಕೆ ತನ್ನ ಹೆಸರು, ಅಡ್ಡ ಹೆಸರು, ಊರ ಹೆಸರು ಹಾಕುವನು ಹೆಸರು ಹಾಕಿ ಹೂ ತುಂಬಿ ಅಲಂಕಾರ ಮಾಡುವನು.

**ಪ್ರಶ್ನೆ : ೨** ಸ್ಪರ್ಧೆಯು ಯಾರಲ್ಲಿ ನಡೆಯುವುದು ?

**ಉತ್ತರ :** ನೀರಮೇಲೆ ತೇಲುವ ಹಾಳಿಹಡಗಗಳು ಮತ್ತು ಆಕಾಶದಲ್ಲಿ ಓಡುವ ಮೋಡಗಳು ಇವರ ನಡುವೆ ಸ್ಪರ್ಧೆ ನಡೆಯುವುದು.

**ಪ್ರಶ್ನೆ : ೩** ಹಡಗಗಳನ್ನು ತೇಲಿ ಬಿಟ್ಟಮೇಲೆ ಬಾಲಕನ ಮನಸ್ಸಿನಲ್ಲಿ ಹುಟ್ಟುವ ಯೋಚನೆಗಳು ಯಾವು ?

**ಉತ್ತರ :** ಹಡಗುಗಳು ಮುಟ್ಟಿದ ಸ್ಥಳದವರಿಗೆ ಅವನ್ನು ಯಾರು ಬಿಟ್ಟರು ಎಂಬುದು ತಿಳಿವುದು. ಅವರಿಗೆ ಹೂ ಸಿಕ್ಕುವುವು. ಹಡಗಗಳನ್ನು ಬಿಟ್ಟಮೇಲೆ ಅವುಗಳನ್ನು ನೋಡುವಾಗ ಸಣ್ಣ ಸಣ್ಣ ತೆರೆಗಳು ಏಳುವುವು. ಗಾಳಿ ಬೀಸುವುದು. ಆಕಾಶದಲ್ಲಿ ಮೋಡಗಳೂ ನೌಕೆಗಳಂತೆ ಸಾಗುವುವು. ಈ ಮೋಡಗಳನ್ನು ಯಾರು

ತೇಲಿಬಿಟ್ಟರು. ಎಲ್ಲಿಂದ ಬಂದುವು. ಎಲ್ಲಿಗೆ ಹೋಗುವುವು ಇದು ತಿಳಿಯದು. ಏಕೆಂದರೆ ಹಡಗುಗಳಂತೆ ಮೋಡಗಳಿಗೆ ಯಾರೂ ಹೆಸರು ಹಾಕಿಲ್ಲ.

೨

**ಪ್ರಶ್ನೆ**: ೧ ಮಗುವು.ತಾಯಿಗೆ ಯಾವ ಕಥೆಯನ್ನು ಹೇಳಲು ಕೇಳುವುದು?

**ಉತ್ತರ**: ಅಟ್ಟಂ ಬಟ್ಟಂ ಆರಣ್ಯ ಎಂಬುದು ಎಲ್ಲಿದೆ, ಅಂಬುವುದನ್ನು ತಿಳಿ ಹೇಳುವ ಕತೆಯನ್ನು ಹೇಳಲು ಮಗುವು ಕೇಳುವುದು.

**ಪ್ರಶ್ನೆ**: ೨ ಅಟ್ಟಂಬಟ್ಟಂ ಆರಣ್ಯಕ್ಕೆ ರಾಜಪುತ್ರನು ಏಕೆ ಹೋಗಿದ್ದನು ?

**ಉತ್ತರ**: ಅಲ್ಲಿ ಒಬ್ಬ ರಾಜಕನ್ನಿಕೆಯು ಸೆರೆ ಸಿಕ್ಕಿದ್ದಳು. ಅವಳ ಕೊರಳಲ್ಲಿ ಆಣಿಮುತ್ತಿನ ಮಾಲೆ ಇದೆ. ಅವಳನ್ನು ಬಿಡಿಸಿಕೊಂಡು ಬರಲು ರಾಜಪುತ್ರನು ಅಟ್ಟಂಬಟ್ಟಂ ಆರಣ್ಯಕ್ಕೆ ಹೋಗಿದ್ದನು.

೩

**ಪ್ರಶ್ನೆ**: ೧ ಮಧ್ಯಾನ್ಹದಲ್ಲಿ ಸಂಜೆಯಾಗಿದೆಯೆಂದು ಮಗುವು ತಾಯಿಗೆ ಹೇಗೆ ತೋರಿಸಲು ಪ್ರಯತ್ನಿಸುವುದು ?

**ಉತ್ತರ**: ನೆಲದ ಅಂಚಿನಲ್ಲಿ ಸೂರ್ಯನು ಮುಳುಗತೊಡಗಿದ್ದಾನೆ. ಮೀನುಗಾರ ಮುದುಕಿ ಸಂಜೆಯ ಅಡಿಗೆಗಾಗಿ ಸೊಪ್ಪನ್ನು ಕಟ್ಟುತ್ತಿದೆ. ಮಾವಿನಗಿಡದ ಬುಡಕ್ಕೆ ಕತ್ತಲೆಯಾಗಿದೆ, ಪೇಟೆಯಿಂದ ಎಲ್ಲರೂ ಮನೆಗೆ ಮರುಳುತ್ತಿದ್ದಾರೆ. ಸಂಜೆಯ ತಾರೆಗಳು ಹುಟ್ಟಿಬಿಟ್ಟವು. ಸಂಜೆ ಆಗಿಯೇ ಬಿಟ್ಟಿತು, ಎಂದು ನಾವೇಕೆ ತಿಳಿಯಬಾರದು. ರಾತ್ರಿ ಹನ್ನೆರಡು ಹೊಡೆವುದು. ಹನ್ನೆರಡು ಹೊಡೆದಾಗ ರಾತ್ರಿಯಾಗಿರಲೇಬೇಕು, ಎಂದು ಹೇಳಿ ಮಗುವು ತಾಯಿಗೆ ಮಧ್ಯಾನ್ಹದಲ್ಲಿ ಸಂಜೆಯಾಗಿದೆಯೆಂದು ತೋರಿಸಲು ಪ್ರಯತ್ನಿಸುವುದು.

**ಪ್ರಶ್ನೆ**: ೨ ಮಗುವ ಈ ಪ್ರಯತ್ನವನ್ನು ಮಾಡುವ ಕಾರಣವೇನು ?

**ಉತ್ತರ**: ಸಂಜೆಯಾದರೆ ಓದುವುದು ಮುಗಿದು ಸೂಟಿ ಸಿಕ್ಕುವುದು. ಇಷ್ಟೆಲ್ಲ ಪ್ರಯತ್ನ ಓದಿನಿಂದ ಸೂಟಿಪಡೆಯಲು, ಮಗುವು ಮಾಡಿತು.

**ಅಭ್ಯಾಸ**: ೧ ನೀವೇ ಬರೆಯಿರಿ.

೨ ತಾಯಿ ಹತ್ತಿರ ಕೂಡಲು ಮಗುವಿಗೆ ಆನಂದ. ಮೇಲಾಗಿ ಮಳೆಬರುತ್ತಿದೆ ಹೊರಗೆ ಆಡಲು ಹೋಗುವಹಾಗಿಲ್ಲ. ಅವ್ವನು ಕತೆಹೇಳದಿದ್ದರೆ ಓದುಬರೆ ಎನ್ನುವಳು. ಅದನ್ನು ತಪ್ಪಿಸಲು ಕತೆಹೇಳು ಎಂದು ಅನ್ನುವುದು ಮಗು. ಕತೆಕೇಳಲು ಮಕ್ಕಳಿಗೆ ಬಲು ಆತುರ.

೩ ನೀವೇ ಬರೆಯಿರಿ.

೪ ನೀವೇ ಅನುಭವದಿಂದ ಬರೆಯಿರಿ.



# ೨೪ ಮಗುವಿನ ಕರೆ

**ಈ ಪಾಠದ ವಿಷಯ ಯಾವುದು ?**

ಸಂಪ್ರದಾಯವಂತರ ಮನೆಯ ಸೊಸೆಯಾಗಿರುವುದೆಂದರೇನು ? ಎಷ್ಟು ಕಷ್ಟಮಯ ಜೀವನವದು ! ಜೀವ ಏಕೆ ರೋಸಿಟ್ಟು ಹೋಗುವುದು ? ಆದರೆ ಬಾಳಿನಲ್ಲಿ ಯಾವುದು ಮನಸೆಳೆಯುವುದು ? ತಾಯಿಗೆ ಮಗುವೇ ಜೀವ. ಅದರ ಕರೆಯ ಮುಂದೆ ಬೇರೆ ಯಾವುದು ಬೇಡ. ಬದುಕುವುದು ಮಗುವಿಗಾಗಿಯೆ. ಎಂಬುದನ್ನು ಇಲ್ಲಿಯ ಕತೆಯು ಹೇಳುತ್ತದೆ.

**ಈ ಪಾಠದ ಸಾರಾಂಶ**

ಮಟ ಮಟ ಮಧ್ಯಾಹ್ನ ಶಾಸ್ತ್ರಿಗಳ ಸೊಸೆ ಕುಡಿಯುವ ನೀರು ತರಲು ಬಾವಿಗೆ ಹೊರಟಳು. ಬಾವಿ ಹಳ್ಳಿಯಿಂದ ಅರ್ಧಮೈಲು ದೂರ. ಸುತ್ತಲು ಸದ್ದು ಆದರೆ ಹೆದರಿಕೆ ಬರುವ ಸ್ಥಿತಿ ಅಲ್ಲಿ. ಆದರೆ ಅದೊಂದೇ ಕುಡಿಯುವ ನೀರಿನ ಬಾವಿ. ಮಡಿಯೊಳಗಿದ್ದ ಒಂದೇ ಒಂದು ಕೊಡ ನೀರು ಉರುಳಿತು. ಅದಕ್ಕೆ ಸೊಸೆ ನೀರಿಗೆ ಆ ವೇಳೆಯಲ್ಲಿ ಹೋಗಬೇಕಾಯಿತು. ಶಾಸ್ತ್ರಿಗಳದು ಪುರಾತನ ಕಾಲದಲ್ಲಿ ದೊಡ್ಡಮನೆ; ಪಾಲಾಗಿ ಪಾಲಾಗಿ ಇವರ ಪಾಲಿಗೆ ಈಗ ಉಳಿದುದು ಒಂದು ಸಣ್ಣ ತುಂಡು. ಅದರಲ್ಲಿ ಅಡಿಗೆ ಮನೆ, ದೇವರಮನೆ, ಪಡಸಾಲೆ, ಬಾಣಂತಿ ಕೋಣೆ. ಗದ್ದಲೋಗದ್ದಲ. ಹೀಗಾಗಿ ಸೊಸೆಯ ಕಾಲು ತಾಕಿ ನೀರಿನ ಕೊಡ ಉರುಳಿತು. ಮಾಡಿದ ತಪ್ಪಿಗೆ ನೀರಿಗೆ ಹೋಗಬೇಕಾಯಿತು; ಎಲ್ಲರೂ ಬೈದವರೆ. ಬಾಯಿಗೆ ಬಂದಂತೆ ಮಾತನಾಡಿದರು. ಸೊಸೆಗೆ ವೇದನೆಯಾದರೂ ಅವಳು ಸೊಸೆಯಲ್ಲವೆ ಮಾತನಾಡುವಹಾಗಿಲ್ಲ. ಬಾವಿಯ ಸಮೀಪ ಬಂದ ಹಾಗೆಲ್ಲ ಅವಳಿಗೆ ಬಾವಿ ಬೀಳಬೇಕೆಂದೆ ಅನ್ನಿಸತೊಡಗಿತು. ತಾನು ನೀರಿಗೆ ಬಂದವಳು ಎಷ್ಟು ಹೊತ್ತಾಯಿತು, ಏನು ಮಾಡುತ್ತಿರುವಳು ಎಂಬುದರ ಅರಿವು ಅವಳಿಗೆ ಇರಲಿಲ್ಲ. ಕೊಡಕ್ಕೆ ಕಟ್ಟಬೇಕಾಗಿದ್ದ ಉಕ್ಕಡ ತನ್ನ ಕೊರಳಿಗೆ ಹಾಕಿಕೊಂಡು ಸರಿಸಿ ನಡುವಿಗೆ ಕಟ್ಟಿದಳು. ಹಗ್ಗದ ಒಂದು ತುದಿ ತೊಲೆಗಂಬಕ್ಕೆ ಕಟ್ಟಿದಳು. ಮುಂದೆ ಹೆಜ್ಜೆ ಇಡುವವಳು, ಯಾರೋ ಅತ್ತಂತಾಯಿತು. ಕೂಸು; ತನ್ನ ಕೂಸು. ಅದಕ್ಕೆ ತಾನಲ್ಲದೆ ಮತ್ತಾರು. ವಾತ್ಸಲ್ಯ, ಪತಿಭಕ್ತಿ ಕೃತಜ್ಞತೆ, ಆದರ ಇವೆಲ್ಲ ನಾಲ್ಕೆಳೆಯ ಹಗ್ಗವಾಗಿ ಮನೆಯ ಕಡೆಗೆ ಎಳೆದವು. ಬಾವಿಯ ನೀರು ಸೇದಿಕೊಂಡು ಮನೆಗೆ ಬಂದಳು. ದಾರಿಯಲ್ಲಿ ಎಲ್ಲ ಶುಭಶಕುನಗಳು. ಅತ್ತೆ ಒಳ್ಳೆಯ ಮಾತನಾಡಿದಳು. ಮಗುವನ್ನು ಕರೆದುಕೊಂಡಳು. ಕುಲದೇವತೆಗೆ ಮನದಲ್ಲಿ ನಮಿಸಿದಳು.

**ಕಠಿಣ ಶಬ್ದಗಳ ಅರ್ಥ**

ದಿವ್ಯ—ಚಮತ್ಕಾರ. ಉಲಿವು—ಸಪ್ಪಳ. ಮಸಣ—ಸ್ಮಶಾನ. ರೋಸಿಡು—ಮನಸ್ಸಿಗೆ ಬೇಸರವಾಗು; ಅಸಹ್ಯವಾಗು. ಗುಬ್ಬಳಿಸು—ಸಪ್ಪಳಮಾಡು. ಜಕ್ಕಣಿ—ಧೂಮಕೇತು—ಬೀಳುವ ನಕ್ಷತ್ರಮಂಡಲ. ಅಧೋಲೋಕ—ಕೆಳಗಿನ ಲೋಕ. ಮೆಲ್ಲು—ತಿನ್ನು.

**ಕಠಿಣ ವಾಕ್ಯಗಳ ಅರ್ಥ**

ಈ ಪಾಠವನ್ನು ಚೆನ್ನಾಗಿ ಓದಿರಿ. ಇಲ್ಲಿ ವಾಕ್ಯಗಳು ಚಿಕ್ಕವಿವೆ. ಮೇಲೆ ಕಾಣುವ ಅರ್ಥ ಬೇರೆ; ಒಳಗಿರುವ ಅರ್ಥ ಬೇರೆ. ಎರಡೂ ಅರ್ಥ ತಿಳಿದಾಗ ಅಲ್ಲಲ್ಲಿ ಹುದುಗಿದ ನಗುವಿನ ಮಾತುಗಳು ತಿಳಿಯುವುವು. ಆಗ ಬರೆಹದ ಸೌಂದರ್ಯ ತಿಳಿವುದು. ಎಲ್ಲ ವಾಕ್ಯಗಳನ್ನು ಅವುಗಳ ಮಾರ್ಮಿಕತೆಯನ್ನು ತಿಳಿಸಲು ಇಲ್ಲಿ ಸ್ಥಳಸಾಲದು ಮನೆ ಚಿಕ್ಕದಿತ್ತು ಎಂಬುದನ್ನು ಹೇಳುವದನ್ನು ಲಕ್ಷಿಸಿರಿ; ಅಡುಗೆ ಮನೆಯಲ್ಲಿ ಮಡಿಯಿಂದ ಅಡ್ಡಾಡುವದೆಂದರೆ ಡೊಂಬರಾಟದ ಚಪಲತೆ ಬೇಕಾಗುವುದನ್ನು ಗಮನಿಸಿರಿ. ಅತ್ತೆಸೊಸೆಯ ಮೇಲೆ ಹರಿಹಾಯುವ ರೀತಿಯನ್ನು ನೋಡಿರಿ. ಜೀವನದಲ್ಲಿ ಅಪಶಬ್ದವು ತಪ್ಪಿದ್ದಲ್ಲ ಎಂಬುದನ್ನು ತಿಳಿಯಿರಿ. ಇತರರು ಏನೆಂದಾರು ಎಂದು ಬದುಕಬೇಕೆ, ತಾನು ತನಗಾಗಿ ಬದುಕಬೇಕೆ ? ಯಾರಿಗಾಗಿ ಬದುಕುವದು ? ಮಗುವಿಗಾಗಿ, ತಾಯಿಗಾಗಿ ಗಂಡನಿಗಾಗಿ. ಈ ಪ್ರಶ್ನೆಗಳನ್ನು ವಿಚಾರಿಸಿರಿ. ಸಿಟ್ಟಿಗೆದ್ದು ಪ್ರಾಣಕೊಡುವುದು ಲೇಸೇ ? ಸಿಟ್ಟಿನ ಸಮಯ ಸರಿದು ಹೋದಮೇಲೆ ಎಲ್ಲವೂ ಶಾಂತವಾಗಿ ಪ್ರೀತಿಪ್ರೇಮ ದೊರೆವುದೆಂಬುದನ್ನು ಲಕ್ಷಿಸಬೇಕು. ಇವನ್ನೆಲ್ಲ ವಿಚಾರಮಾಡುತ್ತ ಪಾಠ ಓದಿದರೆ, ಈ ಕತೆಯ ಇಂಗಿತ ತಿಳಿವುದು. ಇದೊಂದು ಸುಂದರ ಕತೆ, ಸುಂದರ ಬರೆಹ. ಸತ್ವಯುತವಾದ ಬರೆಹ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಸೊಸೆಯು ಮಧ್ಯಾಹ್ನದಲ್ಲಿ ನೀರಿಗೆ ಏಕೆ ಹೋಗಬೇಕಾಯಿತು ?

**ಉತ್ತರ :** ಅಡುಗೆ ಮನೆ ಸಣ್ಣದು. ಅದರಲ್ಲಿ ದೇವರು, ಅಡಿಗೆ ಒಲೆ ಮೀಸಲು ನೀರು ಎಲ್ಲವೂ, ಮಡಿಯಲ್ಲಿ ಅಡ್ಡಾಡುವಾಗ ಕಾಲುತಾಕಿ ಒಂದೇಒಂದು ಕೊಡ ಇದ್ದ ಕುಡಿವನೀರು ಉರುಳಿಹೋಯಿತು. ಅತ್ತೆ ಬೈದರು. ನೀರು ಬೇಕಲ್ಲ. ಅದಕ್ಕೆ ಸೊಸೆಯು ಮಧ್ಯಾಹ್ನದಲ್ಲ ನೀರಿಗೆ ಹೋಗಬೇಕಾಯಿತು.

**ಪ್ರಶ್ನೆ : ೨** ಸೊಸೆಯ ಜೀವವು ರೋಸಿಗಿಟ್ಟ ಕಾರಣವೇನು ?

**ಉತ್ತರ :** ಕಾಲುತಪ್ಪಿ ತಾಕಿ ಉರುಳಿತ್ತು ನೀರು. ಬೇಕಂತಲೆ ಅವಳೇನು ಉರುಳಿಸಿರಲಿಲ್ಲ. ಅತ್ತೆ ಕ್ಷಮಾಗುಣದಿಂದ ನೀರುತರಲು ಹೇಳದೆ ಕೊಂಕುಮಾತಿನಿಂದ ಹೇಳಿದಳು. ಮನೆಯಲ್ಲಿ ನಾದಿನಿಯಿದ್ದರೂ ಅವಳು ಸಂಗಡ ಬರಲಿಲ್ಲ. ಒಬ್ಬಳೆ ಹೊರಟರೂ ಯಾರೂ ಬೇಡವೆನ್ನಲಿಲ್ಲ. ಯಾರಿಗೂ ತಾನು ಬೇಡಾಗಿರುವೆನೆ–ಹುಟ್ಟಿದ

ಮಗುವಿನ ಕಾಲಗುಣ ಕೆಟ್ಟಿಎಂದು ಆಡಿದಮಾತೂ ಕಿವಿಗೆ ಬಿದ್ದಿತು. ಹಾಗಾದರೆ ಬದುಕುವುದೆಂದರೆ ಎಲ್ಲರಿಗೂ ಕಣ್ಣುಕೀಸರು. ಯಾರಿಗೂ ಬೇಡಾದ ಜೀವ ಇಟ್ಟುಕೊಂಡೇನು ಮಾಡುವುದು ಎನ್ನುವಹಾಗೆ ಅವಳಿಗೆ ರೋಸಿಗಿಟ್ಟುಹೋಯಿತು.

**ಪ್ರಶ್ನೆ : ೩** ತನ್ನ ಜೀವಕೊಡುವ ನಿರ್ಧಾರವನ್ನು ಸೊಸೆ ಏಕೆ ಬಿಟ್ಟಳು ?

**ಉತ್ತರ :** ಮಗುವು ಹಸಿದು ಅಳುತ್ತಿದೆಯೆಂಬ ಭಾವನೆ ಉಂಟಾಗಿ ತಾನು ಬಾವಿಯಲ್ಲಿ ಹಾರಿಕೊಳ್ಳ ಬೇಕೆಂಬ ವಿಚಾರಬಿಟ್ಟಳು. ಮುಂದೆ ಒಂದೊಂದೇ ವಿಚಾರ ಕೂಡಿದುವು. ತಾನು ಸತ್ತರೆ ತನ್ನಗಂಡನಿಗೆ ಮಾಡುವವರು ಯಾರು ? ಇಷ್ಟುದಿನ ತನ್ನನ್ನು ಹಿಂದೆ ಚೆನ್ನಾಗಿ ನೋಡಿಕೊಂಡಿದ್ದರ ಕೃತಜ್ಞತಾಭಾವ ನೆನಪಾಯಿತು. ಅದರ ಮೂಲಕ ಆದರ ಹುಟ್ಟಿತು. ಇವೆಲ್ಲ ನಾಲ್ಕು ಹಗ್ಗದಎಳೆಗಳಾಗಿ ಅವಳನ್ನು ಮನೆಯ ಕಡೆಗೆ ಎಳೆದುವು. ಜೀವಕೊಡುವುದನ್ನು ಬಿಟ್ಟು ನೀರುತುಂಬಿಕೊಂಡು ಮನೆಗೆ • ಹೋದಳು. ಅಲ್ಲಿ ಮೊದಲಿನ ಸಿಟ್ಟು ಇರದೆ ಸಂತೋಷ ಸನ್ಮಾನಗಳು ಕಾದಿದ್ದುವು.

**ಅಭ್ಯಾಸ :** ೧ ನೀರು ಉರಳಿತು. ಅಡುಗೆ ಮನೆ ಚಿಕ್ಕದು. ಅಲ್ಲದೆ ಅಡಿಗೆ ಒಲೆ ಹತ್ತಿರವೇ ದೇವರು. ಉರುಳಿದ ನೀರು ಒಳಗೆ ಹೊಕ್ಕು ಒಲೆ ಆರಿತು. ಅಗ್ನಿ ದೇವರು ಶಾಂತರಾದರು. ದೇವರನ್ನು ಇಟ್ಟಲ್ಲಿ ನೀರು ಹೊಕ್ಕಿತು. ದೇವರು ಜಲ ಸಮಾಧಿ ಹೊಂದಿದರು. ದೇವರು ನೀರಲ್ಲಿ ಮುಳುಗಿದರು.

೨. ಸೊಸೆಯೆಂದರೆ ಅವಳಮೇಲೆ ಅಧಿಕಾರ ನಡಸುವವರಿಗೆ ಕಡಿಮೆ ಇಲ್ಲ. ಇನ್ನು ಬಡವರ ಸೊಸೆಯಾಗಿದ್ದರೆ ಮನೆಯ ಹೊರಗಿನವರೂ ಕಂಡದ್ದನ್ನು ಆಡುವರು. ಅದಕ್ಕೆ ಬಾಯಿ ಸಡಿಲು ಬಿಡುವ ಸ್ವಭಾವದವರೆಲ್ಲ ಅವಳಿಗೆ ಅತ್ತೆಂದಿರೇ.

೩. ಮೂರನೆಯ ಪ್ರಶ್ನೆಯ ಉತ್ತರ ನೋಡಿರಿ

**ವ್ಯಾಕರಣ : ೫** ಕೆಳಗಿನ ವಾಕ್ಯಗಳಿಗೆ ಯೋಗ್ಯ ವಿರಾಮ ಚಿನ್ಹ ಕೊಡಿರಿ.

೧. ಮಹಾರಾಯಿತಿ, ಏನು ಮಾಡಿಬಿಟ್ಟೆ ! ೨. ಅತ್ತೆ ಮಾವಂದಿರಿಗೆ ನಾನಾರು ? ೩ ನಾನಾದರೂ ಏನು ಸಾಯಿಲಿ ? ೪. ಮಟ ಮಟ ಮಧ್ಯಾನ್ಹ ಬಾವಿಯಲ್ಲಿ ಗೂಡುಮಾಡಿದ ಹಕ್ಕಿಗಳೆರಡು ಕೂಜಿಸುತ್ತ ಅತ್ತ ಹೋದವು. ೫. ಎಲ್ಲಿ ಮನೆ ? ಎಲ್ಲಿ ಬಾವಿ ? ೬ ಶಂಕರಾ, ಬಾ ಇಲ್ಲಿ.

## ೨೪ ಪಾಶ್ಚಾತ್ಯ ಸ್ತ್ರೀ ಜೀವನ.

**ಈ ಪಾಠದ ವಿಷಯವು ಯಾವುದು ?**

ಪಾಶ್ಚಾತ್ಯ ಸ್ತ್ರೀ ಜೀವನವು ಹೇಗಿರುವುದು ? ಅವರ ದುಡಿತದ ರೀತಿ ಮನರಂಜನೆಯ ವಿಚಾರ ಹೇಗೆ ? ಬಿಡುವಿನ ವೇಳೆಯನ್ನು ಹೇಗೆ ಕಳೆವರು? ಗಂಡಸರು ಮನೆಗೆಲಸಗಳಲ್ಲಿ ಹೇಗೆ ನೆರವಾಗುವರು ? ಮುಂತಾಗಿ ಇಲ್ಲಿ ಹೇಳಿದೆ.

**ಈ ಪಾಠದ ಸಾರಾಂಶ**

ಹೆಣ್ಣುಮಕ್ಕಳಿಗೆ ಸರಿಹೋಗುವ ಎಲ್ಲ ಬಗೆಯ ನೌಕರಿಗಳಲ್ಲಿಯೂ ಸ್ತ್ರೀಯರು ಕೆಲಸಗಾರರಾಗಿ ಇರುವುದನ್ನು ಇಲ್ಲಿ ಕಾಣಬಹುದು ಇಲ್ಲಿ ಗಂಡಹೆಂಡಿರು ಗಳಿಸುವರು. ಮಧ್ಯಮತರಗತಿಯ ಇಲ್ಲಿಯ ಕುಟುಂಬದವರು ನಮ್ಮಲ್ಲಿಯ ಸಿರಿವಂತರ ಕಿಂತಲೂ ಹೆಚ್ಚು ರಸಿಕತೆಯಿಂದ ಸಂಸಾರ ಮಾಡುತ್ತಾರೆ. ಆಟ ನೋಟಗಳಲ್ಲಿ ಇವರಿಗೆ ತುಂಬಾ ಆಸಕ್ತಿ. ಆಟ ಮಕ್ಕಳಿಗೇ ಮೀಸಲು ಎಂಬ ನಮ್ಮ ಕಲ್ಪನೆ ಇಲ್ಲಿ ಇಲ್ಲ. ವಾರಾಂತ್ಯದಲ್ಲಿ ಎಲ್ಲರೂ ಕ್ರೀಡಾ ವಿನೋದಗಳ ಆನಂದದಲ್ಲಿ ಕಳೆವರು. ಬೇರೆ ಬೇರೆ ವಿಹಾರ ಸ್ಥಳಗಳಿಗೆ ಹೋಗುವರು ನಾಯಿಗರಾ ಜಲಪಾತ ನೋಡಲು ಹೋಗುವ ಜನಕ್ಕೆ ಮಿತಿಯೇ ಇಲ್ಲ. ಸಿಮ್ಕೊ ಸರೋವರಕ್ಕೆ ಹೋಗಿ ಬಂದೆವು. ಅಲ್ಲಿ ಊಟ ವಸತಿಯ ಎಲ್ಲ ಏರ್ಪಾಡು ಇದೆ. ದಿನದ ಕೆಲಸ ಮುಗಿಸಿಕೊಂಡು ಮನೆಗೆ ಬೇಕಾಗುವ ಸಾಮಾನು ತರುವುದು ಇಲ್ಲಿಯ ರೂಢಿ.

ಗಂಡಂದಿರು ತಮ್ಮ ಮಡದಿಯರಿಗೆ ಮನೆ ಗೆಲಸಗಳಲ್ಲಿ ಎಲ್ಲ ಬಗೆಯಿಂದಲೂ ನೆರವಾಗುವರು. ಕಪ್ಪು ಬಸಿ ತೊಳೆಸ್ರದರಲ್ಲಿ ನೆರವಾಗಲು ಗಂಡಂದಿರಿಗೆ ಸಂಕೋಚ ವೆನ್ನಿಸುವುದಿಲ್ಲ. ಅದು ತಮ್ಮ ಕರ್ತವ್ಯವೆಂದು ಭಾವಿಸುವರು. ಇದರಿಂದ ಯಾರೊಬ್ಬರ ಕೆಲಸ ಭಾರವೆನ್ನಿಸುವುದಿಲ್ಲ. ನಿರುದ್ಯೋಗಿಗಳಾಗಿ ಹರಟೆಯಲ್ಲಿ ವೇಳೆ ಕಳೆವ ಹೆಂಗಸರು ಇಲ್ಲಿ ಇಲ್ಲ. ಸಿರಿವಂತರಿರಲಿ ಬಡವರಿರಲಿ ಎಲ್ಲರೂ ದುಡಿಯುತ್ತಾರೆ.

**ಕಠಿಣ ಶಬ್ದಗಳ ಅರ್ಥ**

ಓಲೆ—ಪತ್ರ. ಯಾಂತ್ರಿಕ ಕಾಗದ—ಕ್ಷೇಮ ಸಮಾಚಾರ ಪತ್ರ. ಉಚಿತ—ಯೋಗ್ಯ. ವಿಹಾರ ಸ್ಥಳ—ಮನರಂಜನೆಗಾಗಿ ಮೀಸಲಾದ ಸ್ಥಳಗಳು. ಶಿಷ್ಟಾಚಾರ—ನೀತಿ ನಡಾವಳಿ. ಉಜ್ಜು—ತಿಕ್ಕು. ತಜ್ಞರು—ತಿಳಿದವರು; ಪ್ರವೀಣರು.

**ಕಠಿಣ ವಾಕ್ಯಗಳ ಅರ್ಥ**

೧. ಭೂಮಿಯ ಮೇಲಿನ ಅಂತರವು ಹೆಚ್ಚಾದಷ್ಟೂ ಪ್ರೀತಿ ಅಂತ:ಕರಣಗಳು ಹೆಚ್ಚೆಚ್ಚು ಸಮೀಪ ಬರುತ್ತವೆ ಎಂದು ಅನ್ನಿಸುತ್ತಿದೆ.

ಹತ್ತಿರವಿದ್ದು ಬೇಕಾದಾಗ ಬೆಟ್ಟಿಯಾಗಲು ಬರುವುದೆಂದು ಅನ್ನಿಸುವುದರಿಂದ ಅಲಕ್ಷ್ಯವಾಗುವ ಸಂಭವಿರುತ್ತದೆ. ಊರ ಬಿಟ್ಟು ದೂರ ಹೋದಾಗ ಚಡಪಡಿಕೆ ಆಗಿ ನೆನಪು ಆಗುವುದು. ಆಗ ಪ್ರೀತಿ ಹೆಚ್ಚಾಗುತ್ತದೆ; ಅಂತಃಕರಣ ಸಮೀಪ ಬರುತ್ತದೆ.

೨. ತಮ್ಮ ಹೊಟ್ಟೆಯ ಹೊಣೆಯನ್ನು ಇನ್ನೊಬ್ಬರ ಮೇಲೆ ಹೊರಿಸುವುದು. ಅನ್ಯಾಯ, ಅನೀತಿ ಎಂದು ಅವರ ಭಾವನೆ.

ಸ್ವಾವಲಂಬನವು ಸದ್ಗುಣವೆಂದು ತಿಳಿದ ದೇಶಗಳು ಅವು. ಆದ್ದರಿಂದ ಪರಾವಲಂಬನವು ಅಸಹ್ಯವೆನ್ನಿಸುವುದು. ಅದಕ್ಕೆ ಅದು ಸಾಮಾಜಿಕ ಅನ್ಯಾಯ ಅನೀತಿ ಎನ್ನಿ

ಸುವುದು. ದುಡಿಯದೆ ತಿನ್ನುವುದು. ಅಪರಾಧ ಎಂಬ ಭಾವನೆ ಜನತೆಯಲ್ಲಿ ಮೂಡಿರುವುದರಿಂದಲೇ ಆ ದೇಶಗಳು ಇಷ್ಟು ಮುಂದುವರೆದಿವೆ. ದೇವರ ಮೇಲೆ ಭಾರ ಹಾಕಿ ಸುಮ್ಮನೆ ಕೂಡುವವರಲ್ಲ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಪಾಶ್ಚಾತ್ಯ ಮಧ್ಯಮ ತರಗತಿಯ ಕುಟುಂಬಸ್ಥರ ಜೀವನ ರೀತಿ ಹೇಗಿರುವುದು ?

**ಉತ್ತರ :** ಮಧ್ಯಮ ತರಗತಿಯ ಕುಟುಂಬದ ಗಂಡ ಹೆಂಡಿರು ಇಬ್ಬರು ಗಳಿಸುವರು. ಇಬ್ಬರೂ ದುಡಿವುದರಿಂದ ಹಣವೂ ದೊರೆತು ಹೆಚ್ಚು ರಸಿಕತೆಯಿಂದ ಸುಖದಿಂದ ಜೀವನ ನಡೆಸಲು ಸಾಧ್ಯವಾಗುತ್ತದೆ. ಆಧುನಿಕ ಉಪಕರಣಗಳಿಂದ ಆಯಾಸ ಕಡಿಮೆ ಮಾಡಿಕೊಂಡು ಸುಖ ಹೆಚ್ಚಿಕೊಳ್ಳುವರು.

**ಪ್ರಶ್ನೆ : ೨** ಆಟಪಾಟಗಳಲ್ಲಿ ಪಾಶ್ಚಾತ್ಯ ಆ ಬಾಲವೃದ್ಧರು ಹೇಗೆ ಭಾಗವಹಿಸುವರು ?

**ಉತ್ತರ :** ಆಟನೋಟಗಳಲ್ಲಿ ಆ ಜನರಿಗೆ ತುಂಬಾ ಆಸಕ್ತಿ. ನಮ್ಮಲ್ಲಿ ತುಸು ವಯಸ್ಸಾದರೆ ಆಟ ಮುಂತಾದವುಗಳ ಬಗ್ಗೆ ನೀರಸರಾಗುವರು ಆಟವು ಮಕ್ಕಳಿಗೆ ಮೀಸಲು ಎಂದು ತಿಳಿವರು. ಆದರೆ ಪಾಶ್ಚಾತ್ಯರು ಹಾಗಲ್ಲ. ಶನಿವಾರ ರವಿವಾರ ಬಿಡುವಿನ ದಿನಗಳಲ್ಲಿ ಆಬಾಲವೃದ್ಧರೂ ಮೋಜಿನಿಂದ ಕಾಲಕಳೆವರು. ಬಗೆಬಗೆಯ ಕ್ರಿಡಾ ವಿನೋದಗಳ ಆನಂದದಲ್ಲಿ ಓಲಾಡುವರು.

**ಪ್ರಶ್ನೆ: ೩** ಇವರು ಬಿಡುವಿನ ವೇಳೆಯ ಸದುಪಯೋಗವನ್ನು ಹೇಗೆ ಮಾಡಿಕೊಳ್ಳುವರು ?

**ಉತ್ತರ :** ಬಿಡುವಿನ ವೇಳೆಯಲ್ಲಿ ವಿಹಾರ ಸ್ಥಳಗಳಿಗೆ ಹೋಗುವರು. ಜೀವನದಲ್ಲಿಯ ಸುಖವನ್ನು ಹೆಚ್ಚಿಸಿಕೊಳ್ಳುವರು. ನಿರುದ್ಯೋಗಿಗಳಾಗಿ ವೇಳೆಯನ್ನು ಎಂದೂ ಹಾಳುಮಾಡುವುದಿಲ್ಲ.

**ಪ್ರಶ್ನೆ : ೪** ಸಿಮ್ಕೋ ಸರೋವರದಲ್ಲಿ ಸುಧಾತಾಯಿಯವರು ಒಂದು ದಿನವನ್ನು ಹೇಗೆ ಕಳೆದರು ?

**ಉತ್ತರ** ಗೆಳತಿಯರೊಡಗೂಡಿ ಸುಧಾತಾಯಿ ಸಿಮ್ಕೋ ಸರೋವರಕ್ಕೆ ಹೋಗಿದ್ದಳು. ಅಲ್ಲಿ ಈಜಾಡಿದರು, ಮೀನು ಹಿಡಿವುದರಲ್ಲಿ ಗೆಳತಿಯರು ತೊಡಗಿದರು. ಹಸಿವಾದಾಗ ಹೋಟೆಲುಗಳಲ್ಲಿ ತಿಂದು ಸುಖವಾಗಿ ಕಾಲಕಳೆದು ಸಂಜೆಗೆ ಮರಳಿ ಟೋರಾಂಟೊಕ್ಕೆ ಬಂದಳು.

**ಪ್ರಶ್ನೆ : ೫** ಪಾಶ್ಚಾತ್ಯ ಗಂಡಸರು ಮನೆಗೆಲಸದಲ್ಲಿ ಹೆಂಗಸರಿಗೆ ಯಾವ ರೀತಿಯಿಂದ ನೆರವಾಗುವರು ?

**ಉತ್ತರ :** ಗಂಡಂದಿರು ತಮ್ಮ ಮಡದಿಯರಿಗೆ ಎಲ್ಲ ಬಗೆಯಿಂದ ನೆರವಾಗುವರು. ಕಷ್ಟ ಬಿಸಿ ತೊಳೆಯುವಂತಹ ಕೆಲಸಮಾಡಲು ಅವರಗೆ ಸಂಕೋಚವೆನ್ನಿಸುವುದಿಲ್ಲ. ಹೆಂಡತಿಗೆ ನೆರವಾಗುವುದು ತಮ್ಮ ಕರ್ತವ್ಯವೆಂದು ಭಾವಿಸುವರು.

**ಅಭ್ಯಾಸ :** ೧ ಎಲ್ಲರೂ ದುಡಿಯುವರು. ಕೆಲಸ ಯಾವುದೂ ಕೀಳಲ್ಲ. ಗಂಡಸು ಹೆಂಡತಿಗೆ ನೆರವಾಗುವುದು ಕರ್ತವ್ಯ. ದುಡಿತದಲ್ಲಿ ಆಸ್ಥೆವಹಿಸಿದಂತೆ ವಿಶ್ರಾಂತಿ–ವಿನೋದ-ವಿಹಾರಗಳಲ್ಲಿಯೂ ಆಸ್ಥೆವಹಿಸುವರು. ದುಡಿತಕ್ಕೆ ಚಿಕ್ಕವರು ದೊಡ್ಡವರು ಎಂದು ಬೇಧವಿರದಂತೆ ಆಟ ನೋಟಕ್ಕೂ ಭೇದವಿಲ್ಲ. ಎಲ್ಲರೂ ಮನರಂಜನೆಯನ್ನು ಮಾಡಿಕೊಳ್ಳುವರು. ಮನೆಯಲ್ಲಿ ಅಚ್ಚುಕಟ್ಟುತನ ಇವೇ ಮೊದಲಾದ ಸದ್ಗುಣಗಳನ್ನು ಕಲಿಯುವೆವು.

೨. ನಾಯಗಾರಾ ಜಲಪಾತವು ಕಾನಡಾದ ಭಾಗದಲ್ಲಿ ೧೫೮ ಅಡಿಯಿಂದ ಧುಮುಕುವುದು. ಅದರ ಅಗಲಳತೆ ೨೬೦೦ ಫೂಟು ಇದೆ. ಅಮೇರಿಕೆಯ ಭಾಗದಲ್ಲಿ ಅದು ೧೬೨ ಅಡಿಯಿಂದ ಧುಮುಕುವುದು. ಅಗಲಳತೆ ಅದರ ಅರ್ಧದಷ್ಟು ಇದೆ. ಅಂದರೆ ಒಟ್ಟು ಅಗಲಳತೆ ಸುಮಾರು ೪೦೦೦ ಫೂಟು. ಜೋಗದ ಜಲಪಾತವು ೮೩೦ ಅಡಿಯ ಕೆಳಗೆ ಧುಮುಕುವುದು. ಇದು ನಾಲ್ಕು ಟಿಸಿಲಾಗಿ ಬೀಳುವುದು. ನಾಯಗಾರಾದ ವ್ಯಾಪ್ತಿ–ರಭಸ ಹೆಚ್ಚು. ಜೋಗದ ಜಲಪಾತ ಎತ್ತರ ಮತ್ತು ಸೌಂದರ್ಯ ಹೆಚ್ಚು.

**ಪತ್ರಲೇಖನದ** ವಿಷಯವನ್ನು ಚೆನ್ನಾಗಿ ತಿಳಿಯಿರಿ. ಅಲ್ಲಿ ಕೊಟ್ಟ ಸಂಗತಿಗಳನ್ನು ಗಮನಿಸಿರಿ.

**ನೆನಪಿಗಾಗಿ :** ತಮ್ಮ ಹೊಟ್ಟೆಯ ಹೊಣೆಯನ್ನು ಇನ್ನೊಬ್ಬರ ಮೇಲೆ ಹೊರಿಸುವುದು ಅನ್ಯಾಯ, ಅನೀತಿ ಎಂದು ಇವರ ಭಾವನೆ.



## ೨೫ ಕದಂಬ ಕುಲದೀಪಕ

**ಈ ಪಾಠದ ವಿಷಯವು ಯಾವುದು ?**

ಹೇವ ಅಂದರೇನು ? ಅದು ಜೀವನ ಮಾರ್ಪಾಡಿಗೆ ಎಷ್ಟು ಉಪಯುಕ್ತ ಸ್ಫೂರ್ತಿಯಾಗುವುದು, ಎಂಬುದನ್ನು ಕದಂಬ ಕುಲದ ಮೂಲ ಪುರುಷನಾದ ಮಯೂರವರ್ಮನ ಜೀವನ ಚರಿತೆಯು ಈ ಭಾಗವು ಹೇಳುವುದು.

**ಈ ಪಾಠದ ಸಾರಾಂಶ**

ಏಕೆ ಮಯೂರ, ಯಾವಚಿಂತೆ ಬಾಧಿಸುತ್ತದೆ ನಿನಗೆ, ಹೇಳು, ಎಂದು ಗುರುಗಳು ಕೇಳಿದರು. ಗುರುಗಳೇ ಈ ಪಲ್ಲವರಾಜ್ಯವನ್ನು ಸುಡುವಷ್ಟು ಕೋಪ ಬಂದಿದೆ. ಇಂದು ಬೆಳಿಗ್ಗೆ ಕುದುರೆ ಸವಾರನು ನಿನ್ನನ್ನು ಅವಮಾನಗೊಳಿಸಿದನು. ನಮಗೂ ಆ

ರಾವುತನ ಸಂಗಡ ಇದ್ದವರಿಗೂ ಜಗಳವಾಗಿ ನಾವು ಸೋತೆವು. ಈ ಅವಮಾನದ ಬೇಗೆಯಿಂದ ಉರಿಯುತ್ತಿದ್ದೇನೆ ಗುರುಗಳೆ, ಎಂದನು. ಮಯೂರ, ಕಾಲ ವಿಪರೀತ ವಾಗಿದೆ, ಸಮಾಧಾನ ತಾಳಿಕೋ, ಎಂದರು ಗುರುಗಳು. ನನ್ನ ಮಾನಕ್ಕೂ ಪ್ರಾಣಕ್ಕೂ ಸಾಲದ ಈ ಹೇಡಿ ಪಾಂಡಿತ್ಯ ಸಾಕು. ಈ ದರ್ಭೆಯುಗಂಟು ಹೋಮದ ಸವಟು ಸಾಕು. ಇಲ್ಲಿ ಕ್ಷಣಹೊತ್ತು ನಿಲ್ಲಲಾರೆ. ನಮೋನಮಃ ಎಂದು ನಮಸ್ಕರಿಸಿ ಹೊರಟನು ಮಯೂರನು. ಮಯೂರನ ಗುರುಗಳು ವೀರಶರ್ಮ. ಈ ಮಾತುಗಳು ನಡೆದದ್ದು ಕಾಂಚಿಯಲ್ಲಿಯ ಪಾಠಶಾಲೆಯಲ್ಲಿ. ಮಯೂರನು ಖಡ್ಗ ಹಿಡಿದನು. ಸೈನ್ಯ ಕೂಡಿಸಿದನು ಪಲ್ಲವರಾಜ್ಯದ ಅಧಿಕಾರಿಗಳನ್ನು ಸೋಲಿಸಿ ಶ್ರೀಶೈಲದ ಬಳಿ ಒಂದು ಪ್ರಾಂತದ ಒಡೆಯನಾದನು. ಇವನ ವರ್ಚಸ್ಸು ಬೆಳೆಯಿತು. ಸ್ವತಂತ್ರರಾಜ್ಯ ಸ್ಥಾಪಿಸಿದನು. ಬನವಾಸಿ ಅವನ ರಾಜಧಾನಿಯಾಗಿತು. ಮಯೂರನ ಮನೆಯೆದುರು ಕದಂಬ ವೃಕ್ಷವಿದ್ದಿತು. ಆದಕ್ಕೆ ಅವನು ಕದಂಬವಂಶದವನೆಂದು ಆಗಿ ಅದರ ಮೂಲಪುರುಷನಾದನು.

**ಕಠಿಣ ಶಬ್ದಗಳ ಅರ್ಥ**

ಸಂತಾಪ—ಸಿಟ್ಟು. ಇಕ್ಕಟ್ಟಾದ—ಕಿರಿದಾದ. ರಾವುತ—ಕುದುರೆಸವಾರ. ಉನ್ಮತ್ತ—ಸೊಕ್ಕಿದ. ವಿದ್ಯೆಯಆಗರ—ವಿದ್ಯಾಪೀಠ

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಮಯೂರ ಶರ್ಮನು ಗುರುಗಳ ಮಾತನ್ನು ಏಕೆ ಲೆಕ್ಕಿಸಲಿಲ್ಲ?

ಉತ್ತರ : ಗುರುಗಳು ಬ್ರಾಹ್ಮಣ ಸ್ವಭಾವಕ್ಕೆ ಅನುಸರಿಸಿ ಸಾರಾಸಾರ ವಿಚಾರ ಮಾಡಿ ಸಿಟ್ಟಿನ ಕೈಯಲ್ಲಿ ಬುದ್ಧಿಯನ್ನು ಕೊಟ್ಟು ಕೆಡಬೇಡ, ಎಂದು ಹಿರಿತನದಿಂದ ಹೇಳಿದರು. ಆದರೆ ಮಯೂರಶರ್ಮನಲ್ಲಿ ಕ್ಷಾತ್ರ ವೃತ್ತಿ ಕೆರಳಿತ್ತು. ತಾರುಣ್ಯದ ದುಡುಕು ಬೇರೆ. ಅವಮಾನದ ಬೇಗೆ ಸಹಿಸಲಸಾಧ್ಯವಾಗಿತ್ತು. ಅದಕ್ಕೆ ಮಯೂರ ಶರ್ಮನು ಗುರುಗಳ ಮಾತನ್ನು ಲಕ್ಷಿಸಲಿಲ್ಲ.

**ಪ್ರಶ್ನೆ : ೨** ಮಯೂರಶರ್ಮನು ತನಗಾದ ಅಪಮಾನದ ಸೇಡನ್ನು ಹೇಗೆ ತೀರಿಸಿ ಕೊಂಡನು.

**ಉತ್ತರ :** ಪಲ್ಲವರ ರಾಜ್ಯದಲ್ಲಿಯ ರಾವುತನು ಅಪಮಾನ ಮಾಡಿದ್ದನು. ಮುಂದೆ ಪಲ್ಲವ ರಾಜ್ಯದ ಭಾಗಗಳನ್ನು ಆವರ ಅಧಿಕಕಾರಿಗಳನ್ನು ಸೋಲಿಸಿ ಪಡೆದನು. ಪಲ್ಲವ ಅರಸನು ಗಾಬರಿಯಾಗಿ ಇವನನ್ನು ಸೇನಾಪತಿಯನ್ನಾಗಿ ಮಾಡಿದನು. ಎಲ್ಲಿ ಯಾರ ಅಧಿಕಾರ ದರ್ಪದ ಮೂಲಕ ಅಪಮಾನ ಆಗಿದ್ದಿತೋ ಅಲ್ಲಿಯೆ ಅತ್ಯುಚ್ಚ ಮಾನವನ್ನು ಗಳಿಸಿ ಅಪಮಾನದ ಸೇಡು ತೀರಿಸಿ ಕೊಂಡನು. ಮುಂದೆ ಸ್ವತಂತ್ರ ರಾಜ್ಯವನ್ನೆ ಸ್ಥಾಪಿಸಿದನು.

**ಪ್ರಶ್ನೆ : ೩** ಮಯೂರಶರ್ಮನು ಸ್ಥಾಪಿಸಿದ ಅರಸು ಮನೆತನದ ಹೆಸರ್ಯಾವುದು ? ಮತ್ತು ಆ ಹೆಸರು ಏಕೆ ಬಂದಿತು ?

**ಉತ್ತರ :** ಅವನು ಸ್ಥಾಪಿಸಿದ ಅರಸು ಮನೆತನದ ಹೆಸರು ಕದಂಬ ಮನೆತನ ಅವನ ಮನೆಯ ಎದುರು ಕದಂಬ ವೃಕ್ಷವಿದ್ದಿತು. ಅದರ ಮೂಲಕ ಆ ಮನೆತನಕ್ಕೆ ಆ ಹೆಸರು ಬಂದಿತು ?

**ಅಭ್ಯಾಸ :** ಪುಸ್ತಕವನ್ನು ತೆಗೆದು ಕೊಳ್ಳಲು ರಾಮನು **ಕೈಚಾಚಿದನು.** ಕ್ಯಾಮರಾದಲ್ಲಿ ಹಿಡಿದ ಚಿತ್ರದ ಮೂರ್ತಿಯು **ತಲೆ ಕೆಳಗಾಗಿ** ಮೂಡುತ್ತದೆ. ಗಾಂಧೀಜಿಯವರ ಸತ್ಯಾಗ್ರಹದ ಮುಂದೆ ಬ್ರಿಟಿಶರ **ಆಟ ಸಾಗಲಿಲ್ಲ.** ಮಡಿವಂತ ಬ್ರಾಹ್ಮಣನು ತನಗೆ **ದಾರಿ ಬಿಡಲು** ಕೇಳಿ ಕೊಂಡನು. ಸಿಟ್ಟಿಗೆದ್ದ ಭೀಮರಾಯನು **ಬಾಯಿಗೆ ಬಂದಂತೆ ಬೊಗಳಿದನು.**

**ವ್ಯಾಕರಣ :** ೩ (೧) ನನಗೆ ಹಾಲು **ಬೇಕು;** ಚಹವು **ಬೇಡ** (೨) ಪುಸ್ತಕವು **ಇಲ್ಲ;** ಪಾಟಿಯು **ಉಂಟು.** (೩) ಅವನಿಗೆ ಹರಟೆಯೊಂದಾದರೆ **ಸಾಕು;** ಬೇರೆ ಏನೂ ಬೇಡ.

**೪.** (೧) ಉನ್ಮತ್ತ ರಾಜ ಸೇವಕನು ಬಡವರಾದ ನಮ್ಮಂತಹರ ಮೇಲೆ ಹೀಗೆ ಸುಮ್ಮನೆ ಸಿಡಿದು ಬೀಳ**ಬೇಕೆ** ? (೨) ಗುರುವರ, ನನ್ನ ಚಿಂತೆಯನ್ನು ಹೇಳ**ತಕ್ಕದ್ದು** (೩) ಸಮಾಧಾನ, ಇನ್ನೆಲ್ಲಿಯ ಸಮಾಧಾನ! ನಾವಿನ್ನು ಸೈನ್ಯವನ್ನು ಕಟ್ಟ**ತಕ್ಕದು;** ಪಲ್ಲವರ ಸೇಡು ತೀರಿಸಿ ಕೊಳ್ಳಲೇ**ಬೇಕು** (೪) ಕಂಡ ಸಿಟ್ಟಿನ ಕೈಯಲ್ಲಿ ಬುದ್ಧಿಯನ್ನು ಕೊಟ್ಟು ಕೆಡ**ಬೇಡ** (೫) ಮಯೂರಶರ್ಮನ ಪರಾಕ್ರಮದ ಮುಂದೆ ಪಲ್ಲವ ಆಳರಸರ ಆಟವು ನಡೆಯ **ಬಹುದೆ ?** (೬) ಇದ್ದರೆ ಇರ**ಬೇಕು** ಮಯೂರನಂತಹ ಛಲವಾದಿ (೭) ತೊಟ್ಟರೆ ತೊಡ**ಬೇಕು** ಮಯೂರಶರ್ಮನನಂತಹ ಪಣವನ್ನು

**ನೆನಪಿಗಾಗಿ :** ಮಾನಕ್ಕೂ ಪ್ರಾಣಕ್ಕೂ ಸಾಲದ ಹೇಡಿ ಪಾಂಡಿತ್ಯ ಬೇಡ.



# ೨೬ ಸೈರಂಧ್ರಿಯ ಮೊರೆ

**ಈ ಪಾಠದ ವಿಷಯವು ಯಾವುದು ?**

ಸೈರಂಧ್ರಿಯು ಏಕಾಂತದಲ್ಲಿ ಭೀಮನನ್ನು ಕಂಡು ತನ್ನ ಮರ್ಯಾದೆಯನ್ನು ಕಾಯಲು ಬೇಡಿಕೊಳ್ಳುತ್ತಾಳೆ. ಅವರ ಸಂಭಾಷಣೆ ಇಲ್ಲಿದೆ; ಇದು ಸರಳರಗಳೆಯಲ್ಲಿದೆ.

**ಈ ಪಾಠದ ಸಾರಾಂಶ**

ಎನ್ನೊಡೆಯ ನೀನೇನ್ನ ಕಾಯುವುದು. ಕೂಗದಿರು ದ್ರೌಪದೀ, ಬಂದ ಬವಣೆಯದೇನು ? ನಾಯಿ ಕೀಚಕನು ಮಾನಹಾನಿ ಮಾಡಿದನು. ತಾಳಲಾರೆನು **ದೊರೆಯೆ.** ಸುಮ್ಮನಿರು ದ್ರೌಪದಿ. ನಿನ್ನಬವಣೆಯ ಕತೆಯ ನನ್ನೆದುರು ತೋಡಿಕೊಳ್ಳದಿರು. ನಾನಂತು ದುರ್ಬಲನು. ನೀನು ಇಂತು ಮಾತಾಡಲು ನನಗೆ ಯಾರು ಗತಿ?

ದೇವ ಹೆಂಡತಿಯ ಕೆಣಕಿದರೆ ವೈರಿಯನ್ನು ಕಡಿಖಂಡ ಮಾಡುವರು ಜಗದ ಗಂಡರದೆಲ್ಲ. ಗಂಡದೈವರು ನೀವು ಹೆಂಡತಿಯ ಕಾಯಲಾರಿರಿ. ದ್ರೌಪದೀ, ನಿನ್ನ ನುಡಿಗಳ ಧಾರೆ ಎನ್ನೆದೆಯ ಸೀಳುವುದು. ಕೀಚಕನ ತಲೆಗಡಿದು ಕರಳುಗಳ ಹೊರ ತೆಗೆದು ರಕ್ತಸ್ನಾನವಮಾಡಿ ನಿನ್ನೊಡಲ ತಣಿಸುವೆನು. ಅಣ್ಣನೆಳೆದಿರುವ ಗೆರೆಯ ದಾಟಿದೆನು. ಹೇಳೆಲ್ಲಿ ಕೀಚಕನು ? ನಿದ್ರಿಸುವ ಮುನ್ನವೆ ಯಮಪುರಿಗೆ ಕಳಿಸುವೆನು ಹೇಳೆಲ್ಲಿ ಕಾಮುಕನು? ನಾಳೆಯ ದಿನ ಮಲ್ಲಶಾಲೆಯಲ್ಲಿ ಅವನನ್ನು ಕಾಣಬೇಕು ದೇವ ಶಕ್ತಿವಂತರ ಮಡದಿ ಯುಕ್ತಿವಂತಳು ನೀನು. ಇಂದಿನಿರುಳೇ ನಿನ್ನ ಮೋಕ್ಷದ ದಿನವು.

**ಕಠಿಣ ಶಬ್ದಗಳ ಅರ್ಥ**

ಅಗ್ರಣಿ—ಮೊದಲು ಇರುವವ; ಮುಂದಾಳು. ಬವಣಿ—ದು:ಖ ಬಾಣಸಿನ—ಅಡಿಗೆಯವನ. ಒರೆ—ಹೇಳು. ಮಿಳ್ತು—ಮೃತ್ಯು. ರೋಷ—ಸಿಟ್ಟು. ಕಿಡಿ—ಬೆಂಕಿ. ಅರೆವೆಣ್ಣು—ಬೃಹನ್ನಳೆ; ಅರ್ಜುನ. ಕಡಿಖಂಡ—ತುಂಡುತುಂಡ . ಹರಣ—ಪ್ರಾಣ. ಗಳಪು—ಗೊಣಗುಟ್ಟು; ಬಡಬಡಿಸು. ಮರಳುಗಳು—ಭೂತಪ್ರೇತ. ಆಣತಿ—ಆಜ್ಞೆ ಸಮನಿಸಲಿ—ಬರಲಿ. ಖುಲ್ಲ—ನೀಚ.

**ಪ್ರಶ್ನೆ—ಉತ್ತರ**

**ಪ್ರಶ್ನೆ :** ೧ ಬಲ್ಲವನು ಸೈರಂಧ್ರಿಗೆ ಮೆಲ್ಲಗೆ ಮಾತನಾಡಲು ಏಕೆ ಹೇಳುವನು?

**ಉತ್ತರ:** ಇದು ಹೇಳಿಕೇಳಿ ಅಡಿಗೆಮನೆ. ಇಲ್ಲಿ ಯಾವಾಗಲೂ ಗದ್ದಲ. ನುಡಿದತ್ತ ಕಿವಿಗಳು ಅಲ್ಲಿ. ಆದಕ್ಕಾಗಿ ಗುಟ್ಟಾಗಿ ಹೇಳು ಎಂದು ಬಲ್ಲವನು ಸೈರಂಧ್ರಿಗೆ ಹೇಳುವನು.

**ಪ್ರಶ್ನೆ :** ೨ ಸೈರಂಧ್ರಿ ಯಾವ ಬೇಗೆಯಿಂದ ಬಳಲುತಿರುವಳು ?

**ಉತ್ತರ :** ಕೀಚಕನು ಮಾಡಿದ ಅಪಮಾನದ ಬೇಗೆಯಿಂದ ಬಳಲುತಿರುವಳು.

**ಪ್ರಶ್ನೆ :** ೩ ಬಲ್ಲವನು ಯಾರಿಗೆ ಮೊರೆಹೊಗಲು ಸೈರಂಧ್ರಿಗೆ ಹೇಳುವನು ?

**ಉತ್ತರ :** ಧರ್ಮಜನ ಮೊರೆಹೋಗು; ಅರ್ಜುನನ ಮೊರೆಹೋಗು. ಎಂದು ಬಲ್ಲವನು ಸೈರಂಧ್ರಿಗೆ ಹೇಳುವನು.

**ಪ್ರಶ್ನೆ :** ೪ ಸೈರಂಧ್ರಿಯು ಭೀಮನ ಕೋಪವನ್ನು ಹೇಗೆ ಕೆರಳಿಸುವಳು ?

**ಉತ್ತರ :** ಹೆಂಡತಿಯ ಕೆಣಕಿದರೆ ಜಗದ ಗಂಡರು ವೈರಿಯ ಕಡಿಖಂಡ ಮಾಡುವರು. ಗಂಡದೈವರು ನೀವು. ಜಗದ ಪುಂಡರು ನೀವು, ಚಂಡಭುಜಬಟರೆಂದು ಕಾಳಭೈರವರೆಂದು ಗಂಡುಗರ್ವತಾಳಿ ನಿಂತಿರುವ ನೀವು ಹೆಂಡತಿಯ ನೋಡದೆಯೆ ಷಂಡಗಂಡಸರಂತೆ ಗತಿಗೆಟ್ಟುಗಳಪುವಿರಿ. ಎಂದು ಅವನ ಕೋಪವನ್ನು ಕೆರಳಿಸಿದಳು.

**ಪ್ರಶ್ನೆ :** ೫ ಭೀಮನು ಎಂತಹ ಅಪವಾದವನ್ನು ಸೈರಿಸಲು ಸಿದ್ಧನಾಗುವನು?

**ಉತ್ತರ :** ಹಿರಿಯಣ್ಣನಾಜ್ಞೆಯನ್ನು ಭಂಗಿಸಿದ ದೋಷದ ಉರಿಯನ್ನು ತಡೆದುಕೊಳ್ಳುವೆನು. ಧರ್ಮಮೂಲೆಗಳು ಕುಂದಿಟ್ಟು ಜರೆದರೂ ಹೆಣ್ಣಹರಿಬವನಂಬಿ

ಹಿರಿಯನಾಜ್ಞೆಯ ಮೀರಿ ಕೆಟ್ಟಿರುವ ಕೇಡಾಳಿ ಕಲಿಭೀಮನೆಂದರೂ ಸೈರಿಸುವೆ. ಎಂದು ಭೀಮನು ಬರುವ ಅಪವಾದಗಳನ್ನು ಸೈರಿಸಲು ಸಿದ್ಧನಾಗುವನು.

**ಅಭ್ಯಾಸ : ೧** ಮಲ್ಲಶಾಲೆಗೆ ತಾನು ಬರುವುದಾಗಿ ಕೀಚಕನಿಗೆ ಹೇಳಿದ ಯೋಜನೆಯನ್ನು ಭೀಮನ ಕಿವಿಯಲ್ಲಿ ಹೇಳಿದಳು.

೨ (೧) ಪಲ್ಲವ ಅಧಿಕಾರಿಗಳನ್ನು ಯಮಪುರಿಗೆ ಕಳುಹಿಸುವಷ್ಟು ಸಿಟ್ಟು ಬಂದಿತ್ತು ಮಯೂರನಿಗೆ. (೨) ರಾವುತನಿಂದ ಅವಮಾನಿತನಾದಾಗ ಮಯೂರನ ಕರಳು ಕಿವುಚುತ್ತಿತ್ತು. (೩) ಗುರುವು ಸಾವಧಾನನೆಂದು ಉಪದೇಶಿಸಿದರು ಮಯೂರನು ಗೆದ್ದಾಡಿದನು. (೪) ಬಣ್ಣನೆಯ ಮಾತುಗಳು ಮೋಸವೆಂದು ಎಲ್ಲರೂ ತಿಳಿವರು.

೩ ಮೇಲುದನಿಯ ಮೊರೆಯೊಮ್ಮೆ; ನೀನೊಬ್ಬನಿಂತೊರೆಯೆ; ಮರಳುಗಳಿಗೆಡೆಯಡಲು.



# ೨೭-೨೮ ಯಕ್ಷ ಪ್ರಶ್ನೆ

**ಈ ಪಾಠದ ವಿಷಯವು ಯಾವುದು ?**

ಈ ಎರಡೂ ಪಾಠಗಳು ಒಂದೇ ವಿಷಯದ ವಿಸ್ತರಣೆಯಾಗಿವೆ. ಅದಕ್ಕೆ ಒಟ್ಟಿಗೆ ತೆಗೆದುಕೊಳ್ಳಲಾಗಿದೆ. ಪಾಂಡವರ ವನವಾಸ ಮುಗಿದು ಅಜ್ಞಾತವಾಸದ ಸಿದ್ಧತೆಯಲ್ಲಿರುವಾಗ ನಡೆದ ಪ್ರಸಂಗವಿದು ? ಯಕ್ಷನು ಕೇಳುವ ಪ್ರಶ್ನೆಗೆ ಧರ್ಮರಾಜನು ಉತ್ತರಕೊಟ್ಟಿದ್ದಾನೆ. ಆ ಸಂದರ್ಭದ ಸಂಗತಿಗಳನ್ನು ಇಲ್ಲಿ ಹೇಳಲಾಗಿದೆ.

**ಈ ಪಾಠದ ಸಾರಾಂಶ**

ದ್ವೈತವನದಲ್ಲಿ ಒಂದು ಋಷಿಯ ಆಶ್ರಮವಿತ್ತು. ಅವನ ಯಜ್ಞದ ಅರಣಿಗಳನ್ನು ಜಿಗುರೆಯೊಂದು ತೆಗೆದುಕೊಂಡು ಹೋಗಿತ್ತು. ಅದರಿಂದ ಋಷಿಯ ನಿತ್ಯಜೀವನಕ್ಕೆ ತೊಂದರೆಯಯಾಯಿತು. ಅವನು ಧರ್ಮರಾಜನಿದ್ದಲ್ಲಿ ಬಂದು ತನ್ನ ಆಪತ್ತನ್ನು ತೋಡಿಕೊಂಡನು. ಕೂಡಲೇ ಆ ಮೃಗವನ್ನು ಹುಡುಕಲು ತಮ್ಮಂದಿರೊಡನೆ ಧರ್ಮರಾಜನು ಹೊರಟನು. ಅಡವಿಯಲ್ಲಿ ಪಾಂಡವರಿಗೆ ನೀರಡಿಕೆಯಾಯಿತು. ಜಲಾಶಯವನ್ನು ಹುಡುಕಲು ತಂಮ ನಕುಲನಿಗೆ ಹೇಳಿದನು. ಅದು ಸಿಕ್ಕಲು ನೀರು ತರುವುದಕ್ಕೆ ನಕುಲನು ಹೊರಟನು. ‘ ನೀರು ಬೇಕಾಗಿದ್ದರೆ ನನ್ನ ಪ್ರಶ್ನೆಗೆ ಉತ್ತರ ಕೊಡು ’ ಎಂಬ ಧನಿ ಕೇಳಿಸಿತು. ನಕುಲ ಲೆಕ್ಕಿಸದೆ ನೀರು ಕುಡಿದನು. ಮೂರ್ಛೆ ಹೋದನು. ಸರತಿಯಂತೆ ಬಂದ ಸಹದೇವ, ಅರ್ಜುನ, ಭೀಮ ಇವರ ಗತಿಯೂ ಹಾಗೆಯೆ ಆಯಿತು. ಕೊನೆಗೆ ಧರ್ಮನೆ ಬಂದು ನೋಡುತ್ತಾನೆ. ತಮ್ಮಂದಿರೆಲ್ಲರೂ ಮೂರ್ಛೆಹೋಗಿದ್ದಾರೆ ಮತ್ತೆ ಅದೇ ಮಾತು ಕೇಳಿಬಂತು. ನೀನು ಯಾರು ಎಂದು ಧರ್ಮನು ಕೇಳಿದ್ದಕ್ಕೆ, ನಾನು ಯಕ್ಷನು, ನನ್ನ ಪ್ರಶ್ನೆಗಳಿಗೆ ಉತ್ತರ ಹೇಳಿ ನೀರು

ಕುಡಿ ಎಂದನು. ನನ್ನ ಬುದ್ಧಿಗೆ ತಿಳಿದಂತೆ ಪ್ರಾಮಾಣಿಕವಾಗಿ ಉತ್ತರ ಕೊಡುತ್ತೇನೆ ಎಂದನು ಧರ್ಮರಾಜನು. ಪ್ರಶ್ನೋತ್ತರಗಳು ನಡೆದವು. ಧರ್ಮನು ಎಲ್ಲ ಪ್ರಶ್ನೆಗಳಿಗೆ ಉತ್ತರ ಕೊಟ್ಟನು. ನಿನ್ನ ತಮ್ಮಂದಿರಲ್ಲಿ ಯಾರೊಬ್ಬನನ್ನು ಬದುಕಿಸಲಿ ಎಂದು ಯಕ್ಷನು ಕೇಳಿದನು. ನಕುಲನು ಜೀವಂತನಾಗಲಿ ಎಂದನು. ಹೀಗೇಕೆ ಎಂದು ಕೇಳಲು ತಾಯಿಗೆ ಒಬ್ಬ ಮಗನು ಜೀವಂತವಾಗಿರಲಿ ಎಂದು ಹೇಳಿದ್ದನ್ನು ಕೇಳಿ ಧರ್ಮ ರಾಜನ ಧರ್ಮಬುದ್ಧಿಯನ್ನು ಪ್ರಾಮಾಣಿಕತನವನ್ನು ನೋಡಿ ಸಂತೋಷಪಟ್ಟು ಎಲ್ಲ ತಮ್ಮಂದಿರನ್ನು ಬದುಕಿಸಿದನು.

**ಕಠಿಣ ಶಬ್ದಗಳ ಅರ್ಥ**

ಅಜ್ಞಾತವಾಸ—ಗುರುತು ಇನ್ನೊಬ್ಬರಿಗೆ ತಿಳಿಯದ ಹಾಗೆ ಮರೆಯಲ್ಲಿ ವಾಸ ವಾಗಿರುವುದು. ಅರಣಿ—ಯಜ್ಞಕ್ಕಾಗಿ ಬೇಕಾಗುವ ಬೆಂಕಿ ಉಂಟು ಮಾಡುವ ಕಟ್ಟಿಗೆಯ ಸಾಧನಗಳು. ಅಗ್ನಿಕಾರ್ಯ—ಸಂಧ್ಯಾವಂದನೆಯ ಜತೆಗೆ ಮಾಡುವ ಹೋಮ. ಪೌರುಷವಂತ—ಅಸಾಧಾರಣ ಸಾಮರ್ಥ್ಯವುಳ್ಳವ, ಅನತಿದೂರ—ಸಮೀಪ. ಲೋಕೈಕವೀರ—ಜಗತ್ತಿಗೆ ಒಬ್ಬನೇ ಒಬ್ಬ ವೀರನು. ವಿಶ್ವಕರ್ಮ—ದೇವತೆಗಳ ಶಿಲ್ಪಿ. ಕುತಂತ್ರ—ಮೋಸದ ಯೋಜನೆ. ಮೇಘ ಗರ್ಜನೆ—ಗುಡುಗು; ಮೋಡಗಳಿಂದ ಸಪ್ಪಳ. ಆತ್ಮಸ್ತುತಿ—ತನ್ನ ಹೊಗಳಿಕೆ ಅಸದೃಶ—ಇನ್ನೊಬ್ಬರು ಇಂತಹರು ಇಲ್ಲದ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಋಷಿಯ ಅರಣಿಗಳು ಹೇಗೆ ಮಾಯವಾದುವು ?

**ಉತ್ತರ :** ಋಷಿಯು ಅರಣಿಗಳನ್ನು ಗಿಡಕ್ಕೆ ತೂಗುಹಾಕಿದ್ದನು. ಜಿಗರಿಯು ಆ ಗಿಡಕ್ಕೆ ತನ್ನ ಕೊಂಬನ್ನು ತಿಕ್ಕುವಾಗ ಅರಣಿಗಳು ಜಾರಿ ಅದರ ಕೊಂಬಿನಲ್ಲಿ ಸಿಕ್ಕಿ ಕೊಂಡವು. ಬೆಚ್ಚಿಬಿದ್ದ ಜಿಗರಿಯು ಓಡಿಯೋಯಿತು. ಹೀಗಾಗಿ ಅರಣಿಗಳು ಮಾಯವಾದುವು.

**ಪ್ರಶ್ನೆ : ೨** ಧರ್ಮರಾಜನು ಋಷಿಗಳಿಗೆ ಸಹಾಯಮಾಡಲು ಏಕೆ ಸಿದ್ಧ ನಾದನು ?

**ಉತ್ತರ :** ಅರಣಿಗಳು ಕಳೆದು ಹೋದುದರಿಂದ ಋಷಿಯ ಅಗ್ನಿಕಾರ್ಯ ವಿದ್ಯಾದಾನದ ಕಾರ್ಯಗಳು ನಿಂತವು. ಜ್ಞಾನದಾನದಂತಹ ಸತ್ಕಾರ್ಯಕ್ಕೆ ಆದ ಅಡ್ಡಿಯನ್ನು ನಿವಾರಿಸುವುದು ಪೌರುಷವಂತರಾದ ತಮ್ಮ ಕರ್ತವ್ಯವೆಂದು ಋಷಿಗಳಿಗೆ ಸಹಾಯಮಾಡಲು ಸಿದ್ಧನಾದನು.

**ಪ್ರಶ್ನೆ : ೩** ನಕುಲನು, ನೀರಿರುವ ಸ್ಥಳವನ್ನು ಹೇಗೆ ಊಹಿಸಿದನು ?

**ಉತ್ತರ :** ಮರಹತ್ತಿ ನೋಡಿದನು. ಸಮೀಪದಲ್ಲಿ ಗಿಡಗಳ ಗುಂಪು ಕಂಡಿತು. ಸಾರಸ ಪಕ್ಷಿಗಳು ಅಲ್ಲಿ ಹಾರುಡುತ್ತಿದ್ದವು. ಅಲ್ಲಿ ನೀರು ಇರಬೇಕೆಂದು ನಕುಲನು ಊಹಿಸಿದನು.

**ಪ್ರಶ್ನೆ: ೪** ನೀರನ್ನು ಕುಡಿಯಲು ಆಕಾಶವಾಣಿಯು ಹಾಕಿದ ನಿರ್ಬಂಧವಾವುವು?

**ಉತ್ತರ:** ಈ ಸರೋವರದ ಒಡೆತನ ನನ್ನದು. ನನ್ನ ಪರವಾನಗಿ ಇಲ್ಲದೆ ಯಾರೂ ನೀರು ಕುಡಿಯಲಾಗದು. ನಾನು ಕೇಳಿದ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಕೊಟ್ಟರೆ ನಾನು ನೀರು ಕುಡಿಯಲು ಪರವಾನಗಿ ಕೊಡುವೆನು. ಇಲ್ಲದಿದ್ದರೆ ನಿಮ್ಮ ಜೀವವನ್ನು ತೆಗೆದುಕೊಳ್ಳುವೆ, ಎಂದು ಆಕಾಶವಾಣಿಯು ನಿರ್ಬಂಧ ಹಾಕಿತು.

**ಪ್ರಶ್ನೆ: ೫** ಅಶರೀರವಾಣಿಯ ನಿರ್ಬಂಧವನ್ನು ಮನ್ನಿಸದಿದ್ದ ಪಾಂಡವರ ಸ್ಥಿತಿ ಏನಾಯಿತು ?

**ಉತ್ತರ:** ನಿರ್ಬಂಧವನ್ನು ಮನ್ನಿಸದಿದ್ದ ಪಾಂಡವರೆಲ್ಲರೂ ನೀರು ಕುಡಿದು ಮೂರ್ಛೆ ಹೋದರು.

**ಪ್ರಬಂಧ:** ೧ ನೀವೇ ಬರಿಯಿರಿ.

೨ ಗಿರಾಕಿಯು ಕಡಿಮೆ ರೊಕ್ಕ ಕೊಡುವನು. ಏಕೆ ಎಂದು ಅಂಗಡಿಕಾರನು ಕೇಳುವದು. ನಿನಗೆ ಎಣಿಸಲು ತೊಂದರೆ ಕಡಿಮೆಯಾಗಲಿ ಎಂದು ಗಿರಾಕಿ ಹೇಳುವನು.

**ಪ್ರಶ್ನೆ—ಉತ್ತರ ೨೮ ನೆಯ ಪಾಠ**

**ಪ್ರಶ್ನೆ: ೧** ತಮ್ಮಂದಿರ ಸ್ಥಿತಿಯನ್ನು ನೋಡಿ ಧರ್ಮರಾಜನಿಗೆ ಯಾವ ಯಾವ ವಿಚಾರಗಳು ಬಂದವು.

**ಉತ್ತರ:** ಇವರಿಗೆ ಯಾವ ಕಾರಣದಿಂದ ಈ ಗತಿ ಬಂದಿರಬಹುದು ? ಮೈಮೇಲೆ ಯಾವ ಶಸ್ತ್ರದ ಗಾಯಗಳಿಲ್ಲ. ದುರ್ಯೋಧನ ಶಕುನಿಯರ ಕುತಂತ್ರ ವಾಗಿರಬಹುವೆ ? ಯಾರಾದರೂ ಸರೋವರಕ್ಕೆ ವಿಷ ಹಾಕಿರ ಬಹುದೆ ? ಆದರೆ ಇವರ ಪ್ರಸನ್ನ ಮುಖಗಳನ್ನು ನೋಡಿದರೆ ಇದು ವಿಷದ ಪರಿಣಾಮವಲ್ಲ. ಎಂದು ತಮ್ಮಂದಿರ ಸ್ಥಿತಿಯನ್ನು ನೋಡಿ ಧರ್ಮರಾಜನಲ್ಲಿ ವಿಚಾರಗಳು ಮೂಡಿದುವು.

**ಪ್ರಶ್ನೆ: ೨** ಧರ್ಮರಾಜನು ನೀರನ್ನೇಕೆ ಕುಡಿಯಲಿಲ್ಲ ?

**ಉತ್ತರ:** ನೀರು ಕುಡಿಯಲು ಹೋದಾಗ ಆಕಾಶವಾಣಿ ಆಯಿತು. ಪ್ರಸಂಗ ವನ್ನು ತಿಳಿದು ಕೊಳ್ಳಬೇಕೆಂದು ನೀರು ಕುಡಿಯದೆ ಆ ಧ್ವನಿಗೆ ಉತ್ತರ ಕೊಟ್ಟನು ಇನ್ನೊಬ್ಬರ ಒಡೆತನದ ನೀರನ್ನು ಅವರ ಅನುಮತಿಯಿಲ್ಲದೆ ಕುಡಿವುದು ಧರ್ಮವಲ್ಲ ವೆಂದು ನೀರು ಕುಡಿಯಲಿಲ್ಲ.

**ಪ್ರಶ್ನೆ: ೩** ಧರ್ಮರಾಜನು ಯಕ್ಷನನ್ನು ಹೇಗೆ ಸಂತೋಷಗೊಳಿಸಿದನು ?

**ಉತ್ತರ:** ಯಕ್ಷನು ಕೇಳಿದ ಎಲ್ಲ ಪ್ರಶ್ನೆಗಳಿಗೆ ತನಗೆ ತಿಳಿದಂತೆ ಪ್ರಾಮಾಣಿಕವಾಗಿ ಧರ್ಮರಾಜನು ಉತ್ತರ ಕೊಟ್ಟು ಯಕ್ಷನನ್ನು ಸಂತೋಷ ಗೊಳಿಸಿದನು.

**ಪ್ರಶ್ನೆ: ೪** ಯಕ್ಷನು ಕೊಟ್ಟ ವರ ವಾವುದು ?

**ಉತ್ತರ:** ನಿನ್ನ ತಮ್ಮಂದಿರಲ್ಲಿ ಒಬ್ಬನನ್ನು ಬದುಕಿಸುವೆ ಯಾರನ್ನು ಬದುಕಿಸಲಿ ಹೇಳು ಎಂದು ವರವನ್ನು ಕೊಟ್ಟನು.

**ಪ್ರಶ್ನೆ : ೫** ನಕುಲನೇ ಬದುಕಲಿ ಎಂದು ಧರ್ಮರಾಜನು ಏಕೆ ಕೇಳಿ ಕೊಂಡನು ?

**ಉತ್ತರ :** ಕುಂತಿಗೆ ಒಬ್ಬ ಮಗನು ಉಳಿದಿರುವಂತೆ ಇನ್ನೊಬ್ಬ ತಾಯಿ ಮಾದ್ರಿಗೂ ಒಬ್ಬ ಮಗನಿರಲಿ ಎಂದು ನಕುಲನು ಬದುಕಲಿ ಎಂದು ಧರ್ಮರಾಜನು ಕೇಳಿ ಕೊಂಡನು.

**ಪ್ರಶ್ನೆ ೬** ಯಕ್ಷ ಧರ್ಮರಾಜ ಇವರ ಸಂವಾದದಿಂದ ನಾವು ಕಲಿಯ ಬೇಕಾದುದೇನು ?

**ಉತ್ತರ :** ಪ್ರಪಂಚದಲ್ಲಿ ಸಾಮಾನ್ಯವಾಗಿ ಎದರು ಬರುವ ಪ್ರಶ್ನೆಗಳು ಇವು ಇವುಗಳ ಉತ್ತರ ದೊರೆತವು. ಧರ್ಮ ದೃಷ್ಟಿಯೆಂದರೇನು ಎಂಬುದು ತಿಳಿವುದು. ದುಡುಕು ತರವಲ್ಲ. ಪ್ರಾಮಾಣಿಕ ಪ್ರಯತ್ನ ಅವಶ್ಯ. ತಾನೇ ಜಾಣನೆಂಬ ಹೆಮ್ಮೆ ಕೂಡದು. ಮಂತಾಗಿ ನಾವು ಕಲಿಯುತ್ತೇವೆ.

**ಅಭ್ಯಾಸ :** ೮. ಭೀಮಾರ್ಜುನರು ನೀರು ಕುಡಿದು **ಅರಿವು ಗೆಟ್ಟು** ಬಿದ್ದರು. ಮಯೂರನು ರಾವುತನನ್ನು ನೆಲಕ್ಕೆ ಉರುಳಿಸ ಬಹುದಾಗಿತ್ತು. ಆದರೆ ಬಂದ ಪ್ರಸಂಗ ವನ್ನು ಇದಿರಿಸಿದನು. ಕರ್ತವ್ಯದಕ್ಷತೆಯು ಧಾರ್ಮಿಕ ಆಚರಣೆಯಲ್ಲಿ ಮೊದಲನೆಯ ಕೆಲಸ. ಧರ್ಮರಾಜನ ಉತ್ತರಗಳಿಂದ ಯಕ್ಷನು ಪ್ರಸನ್ನನಾದನು.

**ಪ್ರಬಂಧ :** ೧. ಯಕ್ಷ-ಧರ್ಮರಾಜನ ಸಂವಾದ.

ಯಕ್ಷ : ಭೂಮಿಯುಕಿಂತಲೂ ದೊಡ್ಡ ವಸ್ತುವು ಯಾವುದು ?
ಧರ್ಮ : ತಾಯಿಯು ಭೂಮಿಗಿಂತಲೂ ದೊಡ್ಡ ವಸ್ತುವು.
ಯಕ್ಷ : ಅಂತರಿಕ್ಷದಕಿಂತ ಉನ್ನತವಾದುದು ಏನು ?
ಧರ್ಮ : ಅಂತರಿಕ್ಷದಕಿಂತ ಉನ್ನತ ಸ್ಥಾನದಲ್ಲಿ ಇರುವಂತಹರು ತಂದೆ.
ಯಕ್ಷ : ಗಾಳಿಯನ್ನು ವೇಗದಲ್ಲಿ ಮೀರಿಸುವಂತಹದು ಯಾವುದು ?
ಧರ್ಮ : ಮನಸ್ಸು ಗಾಳಿಯನ್ನು ವೇಗದಲ್ಲಿ ಹಿಂದೆ ಹಾಕುವುದು.
ಯಕ್ಷ : ಮನುಷ್ಯನಿಗೆ ಬಿಡಬೇಕೆಂದರೂ ಆಗದ ವಿಷಯವಾವುದು ?
ಧರ್ಮ : ಚಿಂತೆಯನ್ನು ಮನುಷ್ಯ ಬಿಡಲು ಆಗದು ?
ಯಕ್ಷ : ಧರ್ಮವು ಎಲ್ಲಿದೆ ?
ಧರ್ಮ : ಕರ್ತವ್ಯ ದಕ್ಷತೆಯಲ್ಲಿ ಧರ್ಮವು ಇದೆ.
ಯಕ್ಷ : ಕೀರ್ತಿಗೆ ಕಾರಣವಾಗುವುದು ಯಾವುದು ?
ಧರ್ಮ : ದಾನವೇ ಕೀರ್ತಿಗೆ ಕಾರಣವಾಗುವುದು.
ಯಕ್ಷ : ಸ್ವರ್ಗವು ಎಲ್ಲಿದೆ ?
ಧರ್ಮ : ಸತ್ಯದಲ್ಲಿ ಸ್ವರ್ಗವು ಇದೆ.
ಯಕ್ಷ : ಸುಖವು ಇಲ್ಲಿದೆ ?

ಧರ್ಮ : ಶೀಲವನ್ನು ಸಂರಕ್ಷಿಸಿಕೊಳ್ಳುವುದರಲ್ಲಿ ಸುಖವಿದೆ.

ಯಕ್ಷ : ಧನಸಾಧನೆಯ ಉತ್ತಮ ಉಪಾಯವಾವುದು ?

ಧರ್ಮ : ಪ್ರಾಮಾಣಿಕತೆಯು ಧನ ಸಾಧನೆಗೆ ಉತ್ತಮ ಉಪಾಯವು.

ಯಕ್ಷ : ಧನಗಳಲ್ಲಿ ಉತ್ತಮ ಧನವಾವುದು ?

ಧರ್ಮ : ವಿದ್ಯಾಧನವು ಎಲ್ಲ ಧನಗಳಲ್ಲಿ ಶ್ರೇಷ್ಠವಾವುದು. ಅದನ್ನು ಯಾರೂ ಕಸಿದುಕೊಳ್ಳಲಾರರು.

ಯಕ್ಷ : ಲಾಭಗಳಲ್ಲಿ ಉತ್ತಮ ಲಾಭ ಯಾವುದು ?

ಧರ್ಮ : ಆರೋಗ್ಯ ಲಾಭವು ಎಲ್ಲ ಲಾಭಗಳಲ್ಲಿ ಉತ್ತಮ ಲಾಭ.

ಯಕ್ಷ : ಸುಖದಲ್ಲಿ ಉತ್ತಮವಾದುದು ಯಾವುದು ?

ಧರ್ಮ : ತೃಪ್ತಿಯು ಎಲ್ಲ ಸುಖಗಳಲ್ಲಿ ಉತ್ತಮ.

ಯಕ್ಷ : ಜನಪ್ರಿಯತೆಯ ಗುಟ್ಟು ಯಾತರಲ್ಲಿರುವುದು ?

ಧರ್ಮ : ಗರ್ವವನ್ನು ಬಿಟ್ಟರೆ ಮನುಷ್ಯನು ಲೋಕಪ್ರಿಯನಾಗುತ್ತಾನೆ.

ಯಕ್ಷ : ಯಾವುದನ್ನು ಬಿಟ್ಟರೆ ದುಃಖವಾಗುವುದಿಲ್ಲ ?

ಧರ್ಮ : ಸಿಟ್ಟನ್ನು ಬಿಟ್ಟರೆ ದುಃಖಪಡುವ ಪ್ರಸಂಗವೇ ಬರುವುದಿಲ್ಲ.

ಯಕ್ಷ: ಯಾವುದನ್ನು ಬಿಟ್ಟರೆ ಗುಣವಂತನ ಗುತ್ತಾನೆ ?

ಧರ್ಮ: ಲೋಭವನ್ನು ಬಿಟ್ಟರೆ ಮನುಷ್ಯನು ಗುಣವಂತನಾಗುತ್ತಾನೆ

೨ ನೀವೇ ಬರೆಯಿರಿ.

## ೨೯ ವಿದ್ಯುತ್ತಿನ ಪ್ರಭಾವ

**ಈ ಪಾಠದ ವಿಷಯವು ಯಾವುದು ?**

ವಿದ್ಯುತ್ ನಿಸರ್ಗದಲ್ಲಿ ಎಲ್ಲಿ ಹುಟ್ಟುತ್ತದೆ ? ಈ ಶಕ್ತಿಯ ಉಪಯೋಗಗಳೇನು ? ಈ ಶಕ್ತಿಯ ಉಪಯೋಗವನ್ನು ಎಷ್ಟುಮಟ್ಟಿಗೆ ಮಾಡಿಕೊಳ್ಳಬೇಕು ? ಇದನ್ನು ಇಲ್ಲಿ ಹೇಳಿದೆ

**ಈ ಪಾಠದ ಸಾರಾಂಶ**

ವಿದ್ಯುತ್ತು ಉಪಯೋಗದಲ್ಲಿ ಬಂದಾಗಿನಿಂದ ಹಳೆಯಕಾಲದ ಅನೇಕ ತೊಂದರೆಗಳು ಮಾಯವಾಗಿವೆ. ಈ ವಿದ್ಯುತ್ತು ಎಲ್ಲಿಂದ ಬರುತ್ತದೆ ? ನೈಸರ್ಗಿಕ ಶಕ್ತಿಗಳಾದ ಧಬಧಬೆ, ಗಾಳಿ, ಇವುಗಳಿಂದ ಪಡೆಯಬಹುದು. ಇಲ್ಲವೆ ಕಟ್ಟಿಗೆ, ಕಲ್ಲಿದ್ದಲಿ, ಎಣ್ಣೆ ಇವುಗಳಿಂದಲೂ ಉತ್ಪಾದಿಸಬಹುದು. ಹೀಗೆ ತಯಾರಿಸಿದ ವಿದ್ಯುತ್ತನ್ನು ತಂತಿಗಳಿಂದ ದೂರ ದೂರ ಒಯ್ಯಲು ಬರುತ್ತದೆ. ಇದರಿಂದ ಗಾಡಿನಡೆಯಬಹುದು, ಕಾರಖಾನೆಗಳನ್ನು ನಡಸಬಹುದು. ಮಿಂಚಿನರೂಪದಲ್ಲಿ ಇದನ್ನು ಕಂಡುಹಿಡಿದವನು ಬೆಂಜಾಮಿನ್ ಫ್ರಾಂಕಲಿನ್ ಎಂಬ ಅಮೇರಿಕೆಯ ವಿಜ್ಞಾನಿ. ಮನೆಯಲ್ಲಿ ದೀಪಗಳನ್ನು ವಿದ್ಯುತ್ತಿ

ನಿಂದ ಪಡೆದಿದ್ದೇವೆ. ಬೀದಿ ದೀಪಗಳು ಇವು ಗಾಳಿಯಿಂದ ಆರುವುದಿಲ್ಲ, ಬೀಸಣಿಕೆಗೆ, ಅಡಿಗೆಮಾಡಲು, ನೀರುಕಾಸಲು, ಪಾತ್ರೆತೊಳೆಯಲು ಹೀಗೆ ಹಲವಾರು ಉಪಯೋಗ ಗಳು ಆಗುತ್ತವೆ. ಮನರಂಜನೆಗೆ ಇದು ವಾಕ್‌ಚಿತ್ರಗಳಿಂದ ಸಾಧನವಾಗಿದೆ. ರೇಡಿಯೋ, ಟೆಲಿವಿಜನ್, ಟೆಲಿಗ್ರಾಫ್, ಟೆಲಿಫೋನ್ ಈ ಸೌಕರ್ಯಗಳು ವಿದ್ಯುತ್ತಿ ನಿಂದ ಆಗಿವೆ. ಕ್ಷ, ಕಿರಣದ ಮೂಲಕ ಅನೇಕ ರೋಗಗಳ ನಿದಾನದಲ್ಲಿ ಉಪಯೋಗ ವಾಗುವುದು. ಇದು ಆಧುನಿಕ ಜೀವನದಲ್ಲಿ ಒಳ್ಳೆಯ ಸೇವಕನಂತೆಇದೆ. ಇಷ್ಟೇ ಇದರ ಮೇಲೆ ಹೆಚ್ಚು ಅವಲಂಬಿಸಿ ಆಲಸಿಯಾಗಬಾರದು. ಅದನ್ನು ಸೇವಕನಂತೆ ಉಪಯೋ ಗಿಸಬೇಕೇ ಹೊರತು ನಾವು ಅದರ ಗುಲಾಮರಾಗಬಾರದು.

**ಕಠಿಣ ಶಬ್ದಗಳ ಅರ್ಥ**

ಉತ್ಪಾದಿಸು—ಹುಟ್ಟಿಸು; ನಿರ್ಮಾಣಮಾಡು. ಚಾಲಕ—ನಡಿಸುವವ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ನಿಸರ್ಗದಲ್ಲಿ ವಿದ್ಯುತ್‌ಶಕ್ತಿಯು ಎಲ್ಲಿಲ್ಲಿ ಹುಟ್ಟುತ್ತದೆ ?

**ಉತ್ತರ :** ನೀರು, ಗಾಳಿಯಿಂದ ವಿದ್ಯುತ್ ಶಕ್ತಿಯನ್ನು ಹುಟ್ಟಿಸ ಬಹುದು. ನಿಸರ್ಗದಲ್ಲಿ ಮಿಂಚಿನ ರೂಪದಲ್ಲಿ ಅದು ಕಾಣುತ್ತದೆ.

**ಪ್ರಶ್ನೆ : ೨** ಇಂದು ಈ ಶಕ್ತಿಯನ್ನು ಯಾವ ಯಾವ ಕೆಲಸಗಳಿಗೆ ಉಪ ಯೋಗಿಸುತ್ತಾರೆ.

**ಉತ್ತರ :** ಮನೆ ದೀಪ, ಬೀದಿ ದೀಪ, ಬೀಸಣಿಕೆ, ಗಾಡಿ ನಡಸುವುದು, ಕಾರಖಾನೆಗಳಲ್ಲಿ ಉಪಯೋಗ ತಾರು ದೂರನುಡಿ, ರೇಡಿಯೊ, ಟೆಲಿವಿಜನ, ಆಸ್ಪತ್ರಿ ಯಲ್ಲಿ ಉಪಯೋಗ, ಮನೆಗೆಲಸಗಳಲ್ಲಿ ಉಪಯೋಗ ಮುಂತಾದವುಗಳಿಗೆ ಈ ಶಕ್ತಿ ಯನ್ನು ಉಪಯೋಗಿಸುತ್ತಾರೆ.

**ಪ್ರಶ್ನೆ : ೩** ಕ್ಷಕಿರಣಗಳನ್ನು ಸಂಶೋಧಿಸಿದವರು ಯಾರು ?

**ಉತ್ತರ :** ಜರ್ಮನಿಯ ವಿಜ್ಞಾನಿ ರಾಂಟಗೆನ್ನನು ಕ್ಷಕಿರಣವನ್ನು ಸಂಶೋಧಿ ಸಿದನು.

**ಪ್ರಶ್ನೆ : ೪** ಮನೆಗೆಲಸಗಳಲ್ಲಿ ವಿದ್ಯುತ್ತು ಸೇವಕನಂತೆ ಹೇಗೆ ಕೆಲಸ ಮಾಡ ಬಲ್ಲದು ?

**ಉತ್ತರ :** ಪಾತ್ರೆಗಳನ್ನು ತೊಳೆಯುವುದು, ಅರಿವೆಗಳನ್ನು ಒಗೆವುದು, ಮಸರು ಕಡೆವುದು, ಕೊಬ್ಬರಿ ಹೆರೆವುದು, ಚಟ್ನಿ ಕುಟ್ಟುವುದು, ಮುಂತಾದ ಕೆಲಸ ಗಳನ್ನು ವಿದ್ಯುತ್ ಶಕ್ತಿಯಿಂದ ಮಾಡಿಸಿ ಕೊಳ್ಳಬಹುದು.

**ಪ್ರಶ್ನೆ : ೫** ನಾವು ವಿದ್ಯುತ್ ಶಕ್ತಿಯನ್ನು ಎಷ್ಟರ ಮಟ್ಟಿಗೆ ಉಪಯೋಗಿಸ ಬೇಕು ?

**ಉತ್ತರ :** ನಾವು ಆಲಸಿಗರಾಗಿ ನಮ್ಮ ಮೈಯೊಳಗಿನ ಶಕ್ತಿ ಕಡಿಮೆಯಾ ಗುವ ಹಾಗೆ ಅದನ್ನು ಉಪಯೋಗಿಸಬಾರದು. ಅದು ನಮ್ಮ ಸೇವಕನಾಗಿರಬೇಕೇ ಹೊರತು ನಾವು ಅದರ ಗುಲಾಮರಾಗಬಾರದು.

**ಪ್ರಬಂಧ :** ೧ ಮೆಸರ್ಸ ಪಿ. ಎಸ್. ದಿನಕರ ಮತ್ತು ಕಂಪನಿ ವ್ಯಾಪಾರಿಗಳು ಮುಂಬಯಿ ೨

ಮಾನ್ಯರೆ, ವಂದನೆಗಳು. ನಮ್ಮಲ್ಲಿ ಜೋಗ ವಿದ್ಯುತ್ ಶಕ್ತಿ ಪೂರೈಕೆಯಾಗುತ್ತಲಿದೆ. ಈ ಶಕ್ತಿಗೆ ಅನುಗುಣವಾಗುವಂತಹ ಒಂದು ಅಡಿಗೆ ಮಾಡುವ ಸ್ಟೋವ್ ನಮಗೆ ಬೇಕಾಗಿದೆ. ಅದರ ಬೆಲೆ, ಏನು ಇಲ್ಲಿಗೆ ಮುಟ್ಟಲು ಹತ್ತುವ ವೆಚ್ಚ ಮುಂತಾದ್ದನ್ನು ಮರುಟ ಪಾಲಿಗೆ ತಿಳಿಸಿರಿ.

ವಿಳಾಸ : ತಮ್ಮ ನಂಬುಗೆಯ

೨ ಮೆಸರ್ಸ— ಅವರಿಗೆ

ಮಾನ್ಯರೆ ವಂದನೆಗಳು. ನಿಮ್ಮ–ದಿನಾಂಕದ ಕಾಗದ ತಲುಪಿತು. ಇಷ್ಟು ತೀವ್ರವಾಗಿ ಉತ್ತರ ಬರೆದುದಕ್ಕೆ ಕೃತಜ್ಞತರಾಗಿದ್ದೇವೆ. ನಮಗೆ ಸ್ಟೋವ್ ಬೇಕು. ಅದನ್ನು ವಿ. ಪಿ. ಮಾಡಿ ನಮ್ಮ ವಿಳಾಸಕ್ಕೆ ಕಳಿಸುವ ಕೃಪೆಮಾಡಬೇಕು. ಹಣಕೊಟ್ಟು ವಿ. ಪಿ. ಬಿಡಿಸಿ ಕೊಳ್ಳುತ್ತೇನೆ, ಎಂದು ಈ ಮೂಲಕ ಆಶ್ವಾಸನ ಕೊಡುತ್ತೇವೆ.

ತಮ್ಮ ನಂಬುಗೆಯ.

ವಿಳಾಸ : —



## ೩೦ ವಿಲಹೆಲ್ಮ ಕೋನಾರ್ಡ ರಾಂಟಗೆನ್

**ಈ ಪಾಠದ ವಿಷಯವು ಯಾವುದು ?**

ರಾಂಟಗೆನ್ನನು ಮಾಡಿದ ಸಂಶೋಧನ ಯಾವುದು ? ಅದರಿಂದ ಮಾನವ ಕೋಟಿಗೆ ಯಾವ ತರದಿಂದ ಉಪಯೋಗವಾಗಿದೆ ? ಸಂಶೋಧನ ಕಾರ್ಯದಲ್ಲಿ ಹೇಗೆ ತನ್ಮಯನಾಗುತ್ತಿದ್ದನು ? ಅವನ ಸ್ವಭಾವ ವೆಂತಹದು ಮುಂತಾಗಿ ಇಲ್ಲಿ ಹೇಳಿದೆ.

**ಈ ಪಾಠದ ಸಾರಾಂಶ**

ಕ್ಷ, ಕಿರಣಗಳನ್ನು ಕಂಡು ಹಿಡಿದ ಶ್ರೇಯಸ್ಸು ಜರ್ಮನಿಯ ವಿಲಿಹೆಲ್ಮ ಕೋನಾರ್ಡ ರಾಂಟಗೆನ್ ಇವನಿಗೆ ಸಲ್ಲುವುದು. ಇವನು ಜರ್ಮನಿಯ ಒಬ್ಬ ವರ್ತಕನ ಮಗನು ಅಂತಹ ಚುರುಕು ವಿದ್ಯಾರ್ಥಿಯೇನು ಆಗಿರಲಿಲ್ಲ. ಆಟನೋಟಗಳಲ್ಲಿ ಅವನಿಗೆ ವಿಶೇಷ ಪ್ರೀತಿ. ಅಡವಿಯಲ್ಲಿ ಅಲೆದಾಡುವುದು ಅವನ ಆಟವಾಗಿತ್ತು. ಊಟವುಡಿಗೆಯ ಪರಿವೆ ಕೂಡ ಇರುತ್ತಿದ್ದಿಲ್ಲ. ಜುರಿಚ್ ವಿದ್ಯಾಲಯದಲ್ಲಿ ಗಣಿತ ಮತ್ತು ಯಂತ್ರಕಲೆಯ ಅಭ್ಯಾಸಮಾಡಿ ಪದವೀಧರನಾದನು. ಹೊಸ ಸಂಶೋಧನೆ ಮಾಡಬೇಕೆಂದು ಮನಸ್ಸು ಮಾಡಿದನು. ಒಮ್ಮೆ ನಿರ್ವಾತ ನಲಿಕೆಯೊಳಗೆ ವಿದ್ಯುತ್ತನ್ನು ಹರಿಬಿಟ್ಟನು. ಹೊಸದೊಂದು ಸಂಗತಿ ಅವನಿಗೆ ಹೊಳೆಯಿತು. ಒಂದು

ಬಗೆಯ ಪ್ರಕಾಶವು ಅಲ್ಲಿ ಕಾಣುತ್ತಿತ್ತು. ಅದನ್ನೇ, ನೋಡುತ್ತ ವಿಚಾರ ಮಾಡುತ್ತ ನಿಂತುಬಿಟ್ಟಿದ್ದಾನೆ. ಮನೆಗೆ ಬರಲಿಲ್ಲವೆಂದು ಹೆಂಡತಿ ಆಳು ಕಳಿಸಿದಳು. ಕಗ್ಗತ್ತಲೆಯಲ್ಲಿ ಉಪಕರಣಗಳೆದುರು ನಿಂತುಬಿಟ್ಟಿದ್ದಾನೆ. ಊಟಮಾಡಿ ಮತ್ತೆ ಪ್ರಯೋಗ ಶಾಲೆಗೆ ಬಂದನು. ಪ್ರಕಾಶ ಕಿರಣಗಳೆದುರು ಕೈಚಾಚಿದನು. ಕೈಯ ಎಲವುಗಳ ಛಾಯೆಕಾಣುವ ಅದ್ಭುತ ದೃಶ್ಯ ಕಂಡಿತು. ಮನದೊಳಗೆ ಹಿಡಿಸಲಾರದ ಆನಂದವಾಯಿತು. ಜಗತ್ತಿನ ವಿದ್ವಾಂಸರು ಈ ಸಂಶೋಧನೆ ನೋಡಿ ಬೆಚ್ಚಿಬಿದ್ದರು. ಇದಕ್ಕೆ ರಾಂಟಗೆನ್ ಕಿರಣ ಎಂದು ಹೆಸರು ಇಡಬೇಕೆಂದು ಸೂಚಿಸಿದನು. ಆ ಕಿರಣ ನನ್ನವಲ್ಲ, ಅದಕ್ಕೆ ಕ್ಷ ಕಿರಣವೆಂದು ಹೆಸರಿಡಬೇಕೆಂದು ಹೇಳಿದನು. ಸಂಶೋಧನದಿಂದ ದೊರೆತ ಆನಂದವು ಈ ಸತ್ಕಾರದಿಂದ ನನಗೆ ಬಂದಿಲ್ಲವೆಂದನು. ಅವನಿಗೆ ಮುಂದೆ ನೋಬೆಲ್ ಪಾರಿತೋಷಿಕ ದೊರೆಯಿತು. ಕ್ಷ ಕಿರಣಗಳಿಂದ ಮಾನವ ಕೋಟಿಗೆ ಉಪಕಾರವಾಗಿದೆ. ಅವದನ್ನು ಒದಗಿಸಿದ ರಾಂಟಗೆನ್ನನು ನಿತ್ಯ ವಂದ್ಯನಾಗಿದ್ದಾನೆ.

**ಕಠಿಣ ಶಬ್ದಗಳ ಅರ್ಥ**

ಪರಿವೆ—ಎಚ್ಚರ. ನಿರ್ವಾತ—ಗಾಳಿ ಇಲ್ಲದ. ಅಂಜನ—ಸ್ಪಷ್ಟಕಾಣಿಸಲು ನೆರವಾಗುವ ಕಣ್ಣಿನ ಔಷಧಿ. ಸೊತ್ತು—ಆಸ್ತಿ.

**ಕಠಿಣ ವಾಕ್ಯಗಳ ಅರ್ಥ**

೧ ಸತ್ಕಾರ್ಯದಲ್ಲಿ ಮಗ್ನರಾದಾಗ ಅಗುವ ಆನಂದವೇ ನಿಜವಾದ ಆತ್ಮಾನಂದವಾಗಿದೆ.

ಕೆಲಸ ಮಾಡುವುದರಲ್ಲಿ ಆನಂದ ಪಡೆಯುವುದು ಕರ್ಮಯೋಗಿಯ ಲಕ್ಷಣ. ಅವನಿಗೆ ಕೆಲಸ ಮುಖ್ಯ. ಅದರಲ್ಲಿ ತನ್ಮಯನಾಗುವುದು ಮುಖ್ಯ. ಪರಿಣಾಮುವನ್ನು ದೈವದ ಲೀಲೆಗೆ ಬಿಟ್ಟುಕೊಟ್ಟಿರುವನು. ಅದಕ್ಕಾಗಿ ಕಾರ್ಯಮಾಡುವಾಗ ಬರುವ ಆನಂದವೇ ನಿಜವಾದ ಆತ್ಮಾನಂದವು.

**ಪ್ರಶ್ನೆ-ಉತ್ತರ**

**ಪ್ರಶ್ನೆ : ೧** ಬಾಲಕನಾದ ರಾಂಟಗೆನ್ನನು ಏತರಲ್ಲಿ ತನ್ಮಯನಾಗುತ್ತಿದ್ದನು?

**ಉತ್ತರ :** ಅಡವಿಯಲ್ಲಿ ಗಿಡಮರಗಳನ್ನು ನೋಡುವುದರಲ್ಲಿ ಪಶುಪಕ್ಷಿಗಳನ್ನು ನೋಡುತ್ತ ಅಲೆವುದರಲ್ಲಿ, ಆಗಾಗ ಚಿತ್ರ ಬರೆವುದರಲ್ಲಿ ತನ್ಮಯನಾಗುತ್ತಿದ್ದನು. ಆಗ ಅವನಿಗೆ ಊಟದ ಪರಿವೆಯೂ ಇರುತ್ತಿದ್ದಿಲ್ಲ.

**ಪ್ರಶ್ನೆ : ೨** ರಾಂಟಗೆನ್ನನ ಮಹತ್ವದ ಸಂಶೋಧನೆ ಯಾವುದು ?

**ಉತ್ತರ :** ರಾಂಟಗೆನ್ನನ ಮಹತ್ವದ ಸಂಶೋಧನೆಯೆಂದರೆ ಕ್ಷಕಿರಣ ಹುಡಿಕಿದುದು.

**ಪ್ರಶ್ನೆ : ೩** ರಾಂಟಗೆನ್ನನು ಪ್ರಸಿದ್ಧಿಪ್ರಿಯನಲ್ಲವೆಂದು ಅವನ ಯಾವ ಕೃತಿಯಿಂದ ಕಂಡು ಬರುವುದು ?

**ಉತ್ತರ:** ಅವನು ಕಂಡುಹಿಡಿದ ಕಿರಣಕ್ಕೆ ರಾಂಟಗೆನ್ ಕಿರಣವೆಂದು ಹೆಸರು ಇಡಲು ಸೂಚಿಸಿದರು. ಅದಕ್ಕೆ ಅವನು ಇವು ನನ್ನ ಕಿರಣಗಳಲ್ಲ. ಅವು ನಿಸರ್ಗದ ಸೊತ್ತು. ನಾನು ಕಂಡಿದ್ದೇನೆ ಅಷ್ಟೆ. ಅದಕ್ಕೆ ನನ್ನ ಹೆಸರು ಕಾರಣವಿಲ್ಲ. ಅದಕ್ಕೆ ಕ್ಷ ಕಿರಣ ಎಂದು ಹೆಸರಿಡಲಾಯಿತು. ಇದರಿಂದ ಅವನು ಪ್ರಸಿದ್ಧಿ ಪ್ರಿಯನಲ್ಲವೆಂಬುದು ಕಂಡು ಬಂತು.

**ಪ್ರಶ್ನೆ :** ೪ ಕ್ಷ ಕಿರಣಗಳಿಂದ ಮಾನವಕೋಟಿಗೆ ಆದ ಉಪಕಾರ ಯಾವುದು?

ಉತ್ತರ : ಇದರಿಂದ ಕ್ಷಯರೋಗ, ಕರಳುಬೇನೆ ಎಲವು ಮುರಿಯುವಿಕೆ, ಮೊದಲಾದವುಗಳ ಸ್ವರೂಪವನ್ನು ಕಂಡು ಹಿಡಿಯಲು ಸಾಧ್ಯವಾಗಿದೆ. ಇದರಿಂದ ಮಾನವಕೋಟಿಗೆ ಉಪಕಾರವಾಗಿದೆ.

**ಅಭ್ಯಾಸ :** ೧ ದಾನಚಿಂತಾಮಣಿ ಅತ್ತಿಮಬ್ಬೆಯು ದಾನಗಳ ಮೂಲಕ ಜನತೆ ಹಾಡಿ ಹರಿಸಿದರು. ಅಸಾಧ್ಯ ಕೆಲಸವೆಂಬುದನ್ನು ಸಾಧ್ಯಮಾಡಿ ತೋರಿಸಿ ವಿಜ್ಞಾನಿಗಳ ಅಭಿಪ್ರಾಯಗಳನ್ನು ರಾಂಟಗೆನ್ನನು ಅಲ್ಲಗಳೆದನು. ಮಯೂರನನ್ನು ಕೋಪವು ಆವರಿಸಿತ್ತು. ರಾಂಟಗೆನ್ನನು ಮಾಡಿದ ಲೋಕೋಪಕಾರಿ ಸಂಶೋಧನೆಗಾಗಿ ಅವನನ್ನು ಪ್ರಪಂಚವೇ ಅಭಿನಂದಿಸಿತು.

೨ ಕಲಿಯುವುದಕ್ಕೆ ಮಿತಿಯಿಲ್ಲ. ನಿಸರ್ಗದಲ್ಲಿ ಹುದುಗಿದ ಸತ್ಯಕ್ಕೂ ಮುಗಿಯಿಲ್ಲ. ಕೈಕೊಂಡ ಕಾರ್ಯದಲ್ಲಿ ತನ್ಮಯವಾಗಿರುವುದು. ಪ್ರಸಿದ್ಧಿಪ್ರಿಯತೆ ತರವಲ್ಲ. ಎಂಬ ಗುಣಗಳನ್ನು ನಾವು ಕಲಿಯುತ್ತೇವೆ.

೩ ರವೀಂದ್ರನಾಥ ಟಾಗೋರ.

**ಪ್ರಬಂಧ :** ೧—೨ ನೀವೇ ಬರೆಯಿರಿ. ಮೊದಲು ಆ ಪರಿಸ್ಥಿತಿಯ ಅನುಭವ ಪಡೆದ ಹಾಗೆ ವಿಚಾರಿಸಿರಿ. ನಂತರ ಬರೆಯಿರಿ.

**ನೆನಪಿಗಾಗಿ :** ಸತ್ಕಾರ್ಯದಲ್ಲಿ ಮಗ್ನರಾದಾಗ ಆಗುವ ಆನಂದವೇ ನಿಜವಾದ ಆತ್ಮಾನಂದವಾಗಿದೆ.

## ಅನುಭವದ ವಚನಗಳು

**ಈ ಪಾಠದ ವಿಷಯವು ಯಾವುದು ?**

ಇಲ್ಲಿ ಆರು ಅನುಭವದ ವಚನಗಳಿವೆ. ಇವುಗಳನ್ನು ಮನನ ಮಾಡಬೇಕು. ಮಾಣಿಕದ ಮಾತುಗಳಂತೆ ಇವೆ. ಅನುಭವದ ಮಾತುಗಳು ಅಮೃತದಂತೆ.

**ಈ ಪಾಠದ ಸಾರಾಂಶ**

೧ ನನ್ನ ಜನರು ನನ್ನನ್ನು ಹೋಗಳಿ ಬಂಗಾರದ ಶೂಲದಿಂದ ತಿವಿದರು. ಏಕೆಂದರೆ ಹೊಗಳಿಕೆ ನನಗೆ ಮೈಗೂಡಿತು. ಅಯ್ಯೋ. ನಿಮ್ಮ ಮನ್ನಣೆ ಚೂಪಾದ ಅಲಗಾಗಿ ತಾಗಿತ್ತು. ಅಯ್ಯೋ ನೊಂದೆನು. ತಡೆಯಲಾರೆ. ಕೂಡಲಸಂಗಮದೇವನೆ,

ನೀನು ನನಗೆ ಒಳಿತನ್ನು ಬಯಸುವುದಾದರೆ ನನ್ನ ಹೊಗಳಿಕೆಗೆ ಅಡ್ಡಿ ಬಂದು ಅದನ್ನು ತಡೆಯುಪ್ಪ ಧರ್ಮವಂತನೆ.

೨ ನದಿಯಲ್ಲಿ ಸ್ನಾನಮಾಡುವವರೆ, ಪರಧನವನ್ನು ಬಿಡಿರಿ. ಪರದ್ರವ್ಯವನ್ನು ಬಿಡದೆ ನದಿಯಲ್ಲಿ ಸ್ನಾನಮಾಡಿದರೆ ಅದರಿಂದ ಶುಚಿಯಾಗದು. ಅದು ಕೇವಲ ಬಯಲುಸ್ನಾನ. ಕಳವು ಮಾಡಿದ್ದನ್ನು ಬಿಟ್ಟುಕೊಟ್ಟು ಸ್ನಾನಮಾಡಿದರೆ ಕೂಡಲ ಸಂಗಮದೇವನು ಒಲಿವನು ಮತ್ತು ನಿಮ್ಮ ಜತೆಗೆ ಬರುವನು.

೩ ದೇವಲೋಕ ಮಾನವಲೋಕ ಎಂದು ಬೇರೆ ಇಲ್ಲ– ಸತ್ಯಮಾತನ್ನಾಡಿದರೆ ಅಲ್ಲಿಯೇ ಸ್ವರ್ಗಲೋಕ. ಅಸತ್ಯವನ್ನಾಡಿದರೆ ಅದೇ ಮಾನವಲೋಕ. ಸದಾಚಾರವೇ ಸ್ವರ್ಗ. ಅನಾಚಾರವೇ ನರಕ. ಇದಕ್ಕೆ ಪ್ರಮಾಣ ಕೂಡಲಸಂಗಮದೇವ.

೪ ನಾಳೆ ಬರುವಂತಹದು ನಮಗೆ ಇಂದೇ ಬರಲಿ. ಇಂದು ಬರುವಂತಹದು ಈಗಲೇ ಬರಲಿ. ಇದಕ್ಕೆ ಯಾರು ಅಂಜುವರು ? ಇದಕ್ಕೆ ಯಾರು ದು:ಖ ಪಡುವರು ಕೂಡಲಸಂಗಮದೇವ ?

೫ ಯಾವನಿಗೆ ಆಸೆ ಇರುವುದೋ ಅವನು ಇನ್ನೊಬ್ಬರ ·ಅಧೀನದಲ್ಲಿರುವಂತಹನು. ಮನದ ಆಸೆಯ ಕೊನೆಯಲ್ಲಿದೆಯೆಂಬದನ್ನು ಅರಿತಾತನುಕೈಲಾಸದಾಚೆಯಲ್ಲಿರುವನು ಎಂದು ನುಡಿದವ ಅಂಬಿಗರ ಚೌಡಯ್ಯನು.

೬ ಬೆಟ್ಟದ ಮೇಲೆ ಮನೆಯನ್ನು ಮಾಡಿ ಕ್ರೂರಮೃಗಗಳಿಗೆ ಅಂಜಿದರೆ ಹೇಗೆ? ಸಮುದ್ರದ ದಂಡೆಯ ಮೇಲೆ ಮನೆಯನ್ನು ಮಾಡಿ ನೊರೆಗೆ–ನದಿಗೆ ಅಂಜಿದರೆ ಹೇಗೆ? ಸಂತೆಯೊಳಗೆ ಮನೆಮಾಡಿ ಶಬ್ದಕ್ಕೆ ನಾಚಿದರೆ ಹೇಗೆ ? ಚೆನ್ನಮಲ್ಲಿಕಾರ್ಜುನ ದೇವನೇ ಕೇಳು ? ಈ ಲೋಕದಲ್ಲಿ ಹುಟ್ಟಿ ಬಂದಮೇಲೆ ಹೊಗಳಿಕೆ ತೆಗಳಿಕೆ ಬಂದರೆ, ಮನಸ್ಸಿನಲ್ಲಿ ಸಿಟ್ಟಿಗೇಳದೆ ಸಮಾಧಾನದಿಂದ ಇರಬೇಕು.

**ಕಠಿಣ ಶಬ್ದಗಳ ಅರ್ಥ**

ಶೂಲ—ತಿವಿಯುವಂತಹ ಆಯುಧ. ಮೈಗೊಂಡಿತು—ಮೈಗೂಡಿತು; ಮೈಗೆ ಹೊಂದಿಕೆಯಾಯಿತು. ಮಸೆದ—ಚೂಪಾಗಿಸಿದ. ಅಲಗು—ಆಯುಧ ತೊರೆ—ನದಿ; ಬಿಡು. ಮರ್ತ್ಯಲೋಕ—ಮರಣವು ಇರುವ ಲೋಕ. ಅಳುಕು—ದುಃಖಪಡು. ತಡಿ—ದಂಡೆ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಹೊಗಳಿಕೆಯು ಹೊನ್ನಶೂಲವೆಂದು ಬಸವಂಣನವರು ಏಕೆ ಕರೆವರು ?

**ಉತ್ತರ :** ಹೊಗಳಿಕೆಯು ಬಂಗಾರದಂತೆ ಆನಂದ ಕೊಡುವುದು; ಆದರೆ ಅದರಿಂದ ಸಾಧಕನ ಮನಸ್ಸಿಗೆ ಗಾಸಿಯಾಗುವುದು. ಬಂಣ ಬಂಗಾರದ್ದು ಆದರೂ ಅದು ಶೂಲವಾಗಿರುವುದು. ಅದಕ್ಕೆ ಹೊಗಳಿಕೆಯು ಹೊನ್ನಶೂಲವೆಂದು ಕರೆದಿದ್ದಾರೆ.

**ಪ್ರಶ್ನೆ : ೨** ಕೂಡಲ ಸಂಗಮನನ್ನು ಒಲಿಸುವ ಮಾರ್ಗವಾವುದು ?

**ಉತ್ತರ :** ಪರಧನಕ್ಕೆ ಕೈಯಿಕ್ಕಬಾರದು. ಕಳ್ಳತನ, ಕಳವಿನ ಸಾಮಾನು ಬಿಟ್ಟು ಬಿಡುವುದೇ ಕೂಡಲ ಸಂಗಮನನ್ನು ಒಲಿಸುಕೊಳ್ಳುವ ಮಾರ್ಗವು.

**ಪ್ರಶ್ನೆ: ೩** ಬಸವಣ್ಣನವರು ಯಾವುದಕ್ಕೆ ಸ್ವರ್ಗ ಯಾವುದಕ್ಕೆ ನರಕ ಎನ್ನುವರು ?

**ಉತ್ತರ :** ಸತ್ಯವು, ಸದಾಚಾರವು ಸ್ವರ್ಗ; ಮಿಥ್ಯವು, ಅನಾಚಾರವು ನರಕ ಎಂದು ಬಸವಣ್ಣನವರು ಅನ್ನುವರು.

**ಪ್ರಶ್ನೆ : ೪** ಆಸೆಯು ನಮ್ಮನ್ನು ಯಾವ ಸ್ಥಿತಿಯಲ್ಲಿ ಇಡುವುದು ?

**ಉತ್ತರ** ಆಸೆಯುಳ್ಳವನು ಯಾವಾಗಲೂ ಇನ್ನೊಬ್ಬರ ಅಧೀನನು. ಆಸೆ ಇಲ್ಲದವನು ಸ್ವತಂತ್ರನು.

**ಪ್ರಶ್ನೆ : ೫** ಈ ಲೋಕದಲ್ಲಿ ನಾವು ಹೇಗೆ ಇರಬೇಕು ?

ಉತ್ತರ : ಈ ಲೋಕದಲ್ಲಿ ಹೊಗಳಿಕೆಗೆ ತೆಗಳಿಕೆ ಹೊಯ್ದಾಡದೆ ತಾಳ್ಮೆವಹಿಸಿ ಸಮಾಧಾನದಿಂದ ಇರಬೇಕು.

**ಅಭ್ಯಾಸ :** ೧ ಹೊಳೆ—ನದಿ; ಪ್ರಕಾಶಮಾನವಾಗು; ಆಡು — ಆಡು (ಪ್ರಾಣಿ); ಆಟವಾಡು. ಕುಣಿ—ತೆಗ್ಗು; ಕುಣಿ (ನೃತ್ಯ)ದಾಡು. ಎತ್ತು—ದನ (ಎತ್ತು); ಕೈಯಿಂದ ಎತ್ತು. ಗುದ್ದು—ಇಲಿಯ ಗುದ್ದು; (ಹೊಡೆದು) ಗುದ್ದು.

ಇವುಗಳನ್ನು ಉಪಯೋಗಿಸಿ ನೀವೇ ವಾಕ್ಯ ಮಾಡಿರಿ.

**ವ್ಯಾಕರಣ :** ಕೋಷ್ಟಕದಲ್ಲಿ ಕೊಟ್ಟಂತೆ ನಾಮ ಸರ್ವನಾಮ ಕ್ರಿಯಾಪದಗಳನ್ನು ಅವುಗಳ ಸಂಬಂಧವನ್ನು ಬರೆಯಿರಿ





# ಪದ್ಯ ಭಾಗ

## ೧ ಭಾರತಾಂಬೆಯ ಮಹಿಮೆ.

**ಈ ಕವಿತೆಯ ವಿಷಯ ಯಾವುದು ?**

ಭಾರತಾಂಬೆಯ ಮಹಿಮೆಯೆಂತಹದು ? ಭಾರತವನ್ನು ಕಂಡರೆ ಏನೆನ್ನಿಸುವುದು ? ಅಲ್ಲಿಯ ನೆಲ ಜಲ, ಹಕ್ಕಿ ಪಕ್ಕಿ ಯಾವ ಸ್ಫೂರ್ತಿ ಕೊಡುತ್ತವೆ. ಎಂಬುದನ್ನು ಇಲ್ಲಿ ಕವಿ ಹೇಳಿದ್ದಾನೆ.

**ಈ ಪಾಠದ ಸಾರಾಂಶ**

೧. ಭಾರತವನ್ನು ಬಿಟ್ಟು ನನಗೆ ಎಲ್ಲಿಯ ಜೀವನ ? ಭಾರತವು ನನ್ನ ಉಸಿರು; ನನಗೆ ಜನ್ಮ ಕೊಟ್ಟ ಬಸಿರು. ಭಾರತವು ಧನಧಾನ್ಯ–ಮನೆಮಾನ್ಯ. ಭಾರತವು ನನ್ನ ದೇವರ ಮನೆ. ಭಾರತವು ನನ್ನ ಸಂಸಾರ.

೨. ಭಾರತದ ಹೊಲವೆಂದರೆ ಕಾಮಧೇನುವಿನ ಕೆಚ್ಚಲವಿದ್ದಂತೆ. ಭಾರತದ ತಿಳಿನೀರು ಅಮೃತರಸ ಸವಿಹೊಳೆಯು. ಭಾರತದ ಹಸಿರು ಲತೆಗಳು ದೇಹಕ್ಕೆ ಮನಸ್ಸಿಗೆ ಕಲ್ಪವೃಕ್ಷಗಳು. ಭಾರತದ ಪಶು ಪಕ್ಷಿಗಳು ವೈಚಿತ್ರಕ್ಕೆ ಸಾಕ್ಷಿಯಾಗಿವೆ.

೩. ಭಾರತದ ಸಂಸ್ಕೃತ ಭಾಷೆಯೆಂದರೆ ಜ್ಞಾನಭಾಂಡಾರಕ್ಕೆ ಒಂದೇದಾರಿ. ಭಾರತದ ಹಲವಾರು ಭಾಷೆಗಳು ಮೇಳಗೀತೆ. ಭಾರತದ ಇತಿಹಾಸವೆಂದರೆ ಜಗತ್ತಿಗೆ ಧರ್ಮಹೇಳಿದಂತೆ. ಭಾರತದ ಶೌರ್ಯವು ವೈರಿಗಳಿಗೆ ದಿಗಿಲುಂಟು ಮಾಡುವುದು.

೪. ಭಾರತಕ್ಕೆ ಸ್ವಾತಂತ್ರ್ಯ ಪಡೆದುಳಿಸಿ ಕೊಳ್ಳುವುದೇ ನಿಜವಾದ ಮಂತ್ರ. ಭಾರತಕ್ಕೆ ಜಯವೆಂಬುದು ಮನಸ್ಸಿನ ಆಶೆಯ ಪೂರ್ತಿ. ಭಾರತದ ಬಾಂಧವ್ಯವು ನನ್ನ ದಿನ ದಿನದ ಸಾಧನೆಯು. ಭಾರತದ ಯಶಸ್ಸಿನ ಬಗ್ಗೆ ಹಾಡುವುದೇ ನನ್ನ ಹೃದಯದ ಮಿಡಿತ.

೫. ಭಾರತದ ಮಂಗಲವು ಭಗವಂತನ ಒಲುವು. ಭಾರತದ ಏಳ್ಗೆಯೆಂದರೆ ಶಾಂತಿ ಸಮಾಧಾನಗಳಿಗೆ ಆಶ್ರಯವಾಗುವುದು. ಭಾರತೀಯರು ಪ್ರಪಂಚದ ಬಳಗಕ್ಕೆ ಬಲವಿದ್ದಂತೆ. ಭಾರತಾಂಬೆಯಲ್ಲಿ ಭಕ್ತಿ ಇಡುವುದೇ ನನಗೆ ಆತ್ಮ ಶಕ್ತಿ

**ಕಠಿಣ ಶಬ್ದಗಳ ಅರ್ಥ**

ಒಕ್ಕದ—ಒಂದು ಕದ. ಮೇಳವದ ಗೀತೆ—ಹಲವಾರು ಭಾಷೆಗಳಿದ್ದರೂ ಮೇಳದ ಗೀತೆಯಿದ್ದಂತೆ, ಮೇಳ ಗೀತದಲ್ಲಿ ಧ್ವನಿಗಳು ಹಲವಾರು ಇದ್ದರೂ ಒಂದೇ ಧ್ವನಿಯಾಗಿ ಕೇಳಿಸುವುದು. ಎರಕೆ—ಎರಕಹೊಯ್ಯುವುದು. ಬಾಂಧವ್ಯವನ್ನು ದಿನ ದಿನವೂ ಬೆಳೆಸುವುದು.

**ಕಠಿಣ ವಾಕ್ಯಗಳ ಅರ್ಥ**

೧. ಭಾರತಾಂಬೆಯ ಭಕ್ತಿ ನನಗೆ ಆತ್ಮ ಶಕ್ತಿ.

ದೇಶ ಪ್ರೇಮವು ನನಗೆ ಆತ್ಮ ಶಕ್ತಿಯನ್ನು ಕೊಡುವುದು. ದೇಶ ಪ್ರೇಮವು ಶಕ್ತಿಯನ್ನು ಕೊಡುವುದು. ಧೈರ್ಯವನ್ನು ಕೊಡುವುದು ಆತ್ಮ ವಿಶ್ವಾಸವನ್ನು ಕೊಡುವುದು. ಇವೆಲ್ಲ ಕೂಡಿದರೆ ಆತ್ಮ ಶಕ್ತಿಯಾಗುವುದು.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಭಾರತವೇ ತನ್ನ ಸರ್ವಸ್ವವೆಂದು ಕವಿಯು ಹೇಗೆ ಹೇಳಿದ್ದಾನೆ.

**ಉತ್ತರ :** ಭಾರತವು ತನ್ನ ಜೀವನ, ತನ್ನ ಉಸಿರು, ತನ್ನ ತಾಯಿ, ತನ್ನ ಧನ ಧಾನ್ಯ, ಮನೆ ಮಾನ್ಯ, ತನ್ನ ದೇವಾಲಯ, ತನ್ನ ಸಂಸಾರ ಎಂದು ಹೇಳಿ ಭಾರತವು ತನ್ನ ಸರ್ವಸ್ವ ಎಂದು ಕವಿಯು ಹೇಳಿದ್ದಾನೆ.

**ಪ್ರಶ್ನೆ : ೨** ಭಾರತದ ನೆಲ-ಜಲ-ಬೆಳೆ ಇವುಗಳನ್ನು ಸ್ವರ್ಗ ಲೋಕದ ಯಾವ ವಸ್ತುಗಳಿಗೆ ಹೋಲಿಸಿದ್ದಾನೆ ?

**ಉತ್ತರ :** ಭಾರತದ ನೆಲವು ಕಾಮಧೇನುವಿನ ಕೆಚ್ಚಲವು; ಭಾರತದ ನೀರು ಅಮೃತದ ಸವಿ ಹೊಳೆಯು; ಭಾರತದ ಗಿಡಗಳು ಕಲ್ಪ ವೃಕ್ಷಗಳು ಎಂದು ಸ್ವರ್ಗ ಲೋಕದ ವಸ್ತುಗಳಿಗೆ ಹೋಲಿಸಿದ್ದಾನೆ.

**ಪ್ರಶ್ನೆ : ೩** ಭಾರತದ ಭಾಷೆಗಳ ಬಗೆಗೆ ಕವಿಯೇನು ಹೇಳಿದ್ದಾನೆ ?

ಉತ್ತರ : ಭಾರತದಲ್ಲಿ ಹಲವಾರು ಭಾಷೆಗಳು ಇದ್ದರೂ ಅವೆಲ್ಲ ಒಂದೇ ಮೇಳ ಗೀತೆಯಂತೆ ಒಂದೇ ಧ್ವನಿಯನ್ನು ತೋರುವುವು.

**ಪ್ರಶ್ನೆ : ೪** ಭಾರತವು ಜಗತ್ತಿಗೆ ಯಾವ ಕರೆಯನ್ನು ಕೊಡುವುದು ?

ಉತ್ತರ : ಭಾರತದ ಚರಿತ್ರೆಯು ಜಗತ್ತಿಗೆ ಧರ್ಮದ ಕರೆಯನ್ನು ಕೊಡುವುದು.

**ಪ್ರಶ್ನೆ : ೫** ಕವಿಯು ತನ್ನ ಶಕ್ತಿಯನ್ನು ಏತರಲ್ಲಿ ಕಾಣುವನು ?

ಉತ್ತರ : ಭಾರತಾಂಬೆಯಲ್ಲಿ ಭಕ್ತಿ ಇಡುವುದರಿಂದ ತನಗೆ ಆತ್ಮ ಶಕ್ತಿಯುಂಟಾಗುವುದು. ಎಂದು ಕವಿಯು ಹೇಳುತ್ತಾನೆ.



## ೨ ಅವಿಚಾರದ ಫಲ

**ಈ ಕವಿತೆಯ ವಿಷಯವು ಯಾವುದು ?**

ತಾನು ಸಾಕಿದ ಮುಂಗಲಿಯನ್ನು ಅವಿಚಾರದಿಂದ ಕೊಂದ ಕತೆ ಇಲ್ಲಿದೆ.

**ಈ ಪಾಠದ ಸಾರಾಂಶ**

೧. ಜಿನದತ್ತನೇ ಕೇಳು ಅಪೂರ್ವವಾದ ಕತೆಯೊಂದು ಇದೆ. ಅಮರಖೇಟ ವೆಂಬೂರೊಳು ಜನರಿಂದ ಸ್ತುತಿಸಲ್ಪಟ್ಟ ಚಂದ್ರದತ್ತನೆಂಬ ಹೆಸರಿನಿಂದ ಮೇದನೀ ದೇವನೊಬ್ಬನು ಇದ್ದನು.

೨. **ವಚನ :** ಆತನ ಹೆಂಡತಿ ಯಜ್ಞದತ್ತೆಯೆಂಬಾಕೆಯೊಂದು ಮುಂಗುಲಿ ಯನ್ನು ಸಾಕಿದ್ದಳು. ಮಕ್ಕಳಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದಳು. ಹೀಗಿರಲು ಒಂದು ದಿವಸ

ತೊಟ್ಟಿಲೊಳು ತನ್ನ ಕೂಸನ್ನು ಮಲಗಿಸಿ ಆ ಹೆಣ್ಣುಮಗಳು ಹೊತ್ತು ಕಳೆ ಯಲು ಮನಸ್ಸಿಗೆ ಬಂದಲ್ಲಿ ಹೋದಳು. ಅಷ್ಟರಲ್ಲಿ ತಿಪ್ಪೆಯಿಂದ ಹಾವೊಂದು ಬಂದು ನಿದ್ದೆಮಾಡುತ್ತಿದ್ದ ಆ ಮಗುವಿನ ಹತ್ತಿರ ಬರಲು

೩. ಆ ಹಾವು ಮಗುವನ್ನು ಕೊಲ್ಲಲು ಬಂದಿರುವುದೆಂದು ತಿಳಿದು ಅದರ ಬೆನ್ನು ಹತ್ತಿ ಮುಂಗಲಿಯು ಹಾವನ್ನು ಹಿಡಿದು ಕೊಂದು ಆನಂದದಿಂದ ತನ್ನ ಸಾಕಿ ದಾಕೆಯ ಕಾಲಮೇಲೆ ಹೊರಳಾಡಹತ್ತಿತು. ಆಗ,

೪ **ವಚನ :** ಮುಂಗಲಿಯ ಬಾಯಿಯ ರಕ್ತವನ್ನು ಕಂಡು ಮಗುವನ್ನು ಕೊಂದಿರುವುದೆಂದು ಸಿಟ್ಟಿಗೆದ್ದು ತಾನು ಹಿಡಿದಿದ್ದ ಒನಕೆಯನ್ನು ಎತ್ತಿ ಮುಂಗುಲಿಯ ತಲೆಯ ಮೇಲೆ ಎರಡು ಹೋಳಾಗುವಂತೆ ಹೊಡೆದು ಕೊಂದು

ಮರುಗಿ ಕುದಿದು, ಒಳಗೆ ಬಂದು ನೋಡಿದಳು. ಮಲಗಿದ ಮಗನನ್ನು, ಸತ್ತು ಬಿದ್ದ ಹಾವಿನ ಹೆಣವನ್ನು ಕಂಡಳು. ಆಗ,

೫. ತನ್ನ ಮಗುವನ್ನು ಕಾಯಲು ಹಾವನ್ನು ಕೊಂದ ಮುಂಗಲಿಗಾಗಿ ತಾನು ಅತಿ ಆದರದಿಂದ ಕೂಡಾಡದೆ ಕೊಂದೆನೆಂದು ಬಳಿಕ ಮಿಡಮಿಡನೆ ಮಿಡುಕಿ ಮರು ಗಿದಳು.

**ಕಠಿಣ ಶಬ್ದಗಳ ಅರ್ಥ**

ಮೇದಿನಿ ದೇವ—ಬ್ರಾಹ್ಮಣ. ಪೆಸರು—ಹೆಸರು. ಮುಂಗುರಿ—ಮುಂಗುಲಿ ಅಕ್ಕರಿಂ—ಪ್ರೀತಿಯಿಂದ. ಪಟ್ಟಿರಿಸಿ—ಮಲಗಿಸಿ. ಒಟ್ಟಜೆ—ತಿಪ್ಪಿ. ಪಾವು—ಹಾವು. ಉರುಗ—ಹಾವು. ಆಗಳ್—ಆಗ. ಮುನಿದು—ಸಿಟ್ಟಿಗೆದ್ದು. ಇರ್ಪೋಳು—ಎರಡು ಹೋಳು; ವಿಷಧರ—ಹಾವು. ಪೆಣ—ಹೆಣ.

**ಪ್ರಶ್ನೆ—ಉತ್ತರ**

**ಪ್ರಶ್ನೆ :** ೧ ಮುಂಗುಲಿಯು ಮಾಡಿದ ಸಾಹಸದ ಕೆಲಸವಾವುದು ?

**ಉತ್ತರ** ತೊಟ್ಟಿಲೊಳು ಮಲಗಿದ ಕೂಸನ್ನು ಕಡಿದೀತೆಂದು ಬಗೆದು ಅಲ್ಲಿ ಬಂದ ಹಾವನ್ನು ಬೆನ್ನಟ್ಟಿ ಹಿಡಿದು ಕೊಂದಿತು. ಇದೇ ಸಾಹಸದ ಕೆಲಸ.

**ಪ್ರಶ್ನೆ : ೨** ಯಜ್ಞದತ್ತೆಗೆ ಮುಂಗುಲಿಯಮೇಲೆ ಏಕೆ ಸಂಶಯಬಂದಿತು ?

**ಉತ್ತರ :** ಮುಂಗುಲಿಯ ಬಾಯಿಗೆ ನೆತ್ತರು ಹತ್ತಿತ್ತು. ಇದೇ ಕೂಸನ್ನು ತಿಂದಿದೆಯೆಂದು ಯಜ್ಞದತ್ತೆಗೆ ಸಂಶಯ ಬಂದಿತು.

**ಪ್ರಶ್ನೆ : ೩** ಅವಿಚಾರವೆಂದು ಏತಕ್ಕೆ ಕರೆಯಬೇಕು. ಯಜ್ಞದತ್ತೆಯು ಮಾಡಿದ ಅವಿಚಾರ ಯಾವುದು ?

**ಉತ್ತರ :** ಅವಿಚಾರ ಎಂದರೆ ವಿಚಾರಮಾಡದೆ ಇರುವುದು. ಮುಂಗುಲಿಯ ಬಾಯಿಗೆ ನೆತ್ತರು ಹತ್ತಿದ್ದು ನಿಜ. ಆದರೆ ಸಾಕಿದ ಪ್ರಾಣಿಯದು. ನಿತ್ಯವೂ ಮನೆಯಲ್ಲಿರುವುದು. ಒಂದುವೇಳೆ ಕೂಸನ್ನು ಅದೇ ತಿಂದಿದ್ದರೆ ಹಾಗೆ ಬಂದು ಕಾಲ ಮೇಲೆ ಏಕೆ ಹೊರಳಾಡುತ್ತಿತ್ತು? ಇದನ್ನೆಲ್ಲ ವಿಚಾರಿಸದೆ ಸುಮ್ಮನೆ ಬಾಯಿಗೆ ರಕ್ತಹತ್ತಿದೆಯೆಂದ ಕೂಡಲೆ ಅದು ಮಲಗಿದ ಕೂಸನ್ನೆ ತಿಂದಿದೆಯೆಂದು ತಿಳಿಯುವುದು ಅವಿಚಾರವು. ಅದನ್ನು ನಂಬಿ ಮುಂಗಲಿಯನ್ನು ಕೊಂದುದು ಅವಿಚಾರದ ಫಲ.

**ಅಭ್ಯಾಸ :** ೧ ಹಾವು—ಮುಂಗಲಿ. ಹಾವು—ಗರುಡಪಕ್ಷಿ. ಇಲಿ—ಬೆಕ್ಕು. ಚೇಳು—ಹಲ್ಲಿ. ಸಿಂಹ—ಆನೆ.



## ೩ ಯುಗಾದಿ

**ಈ ಕವಿತೆಯ ವಿಷಯವು ಯಾವುದು ?**

ಯುಗಾದಿ ಯಾವಾಗ ಬರುವುದು ? ಆಗ ಯಾವ ಋತು ? ಕಣ್ಣಿಗೆ ಏನೇನು ಕಾಣುವುದು ಆಗ ? ಮಾನವ ಜೀವನಕ್ಕೂ ಉಳಿದ ಜೀವನಕ್ಕೂ ಅಂತರವೇನು ? ಎಂದು ಮುಂತಾಗಿ ಹೇಳಿದೆ ?

**ಈ ಪಾಠದ ಸಾರಾಂಶ**

೧. ಯುಗಾದಿ ಕಳೆದರೂ ಮತ್ತೆ ಯುಗಾದಿ ಬರುತ್ತಿದೆ. ಹೊಸ ವರುಷಕ್ಕೆ ಹೊಸ ಹರುಷ ತರುತ್ತಿದೆ; ಹೊಸತನ್ನು ತರುತ್ತಿದೆ.

೨ ಹೊಂಗೆ ಹೂ ಗೊಂಚಲಲ್ಲಿ ಗುಂಗೀ ಹುಳದ ಸಂಗೀತದಾಟವು ಮತ್ತೆಕಾಣ ಬರುತ್ತಿದೆ. ಬೇವು ಕಹಿಯಾಗಿದ್ದರೂ ಅಲ್ಲಿ ಕೂಡ ಹೂವಿನ ಕಂಪು ಸೂಸಿ ಅದಕ್ಕೂ ಜೀವಕಳೆ ತರುತ್ತದೆ.

೩ ಮಾವಿನ ಮರವು ಹೂತಿದೆ, ಕಾಮುನಿಗಾಗಿ ಕಾದಿದೆ. ಸುಗ್ಗಿ ಎಂದು ಹಿಗ್ಗಿ ಗಿಳಿಯಸಾಲು ತೋರಣದಂತೆ ಸಾಲಾಗಿ ಸಾಗುವುವು.

೪. ವರುಷಕ್ಕೆ ಒಂದು ಹೊಸತು ಜನ್ಮ. ಹರುಷಕ್ಕೆ ಒಂದು ಹೊಸತು ನೆಲೆ, ಉಳಿದ ಜೀವ ಜಾತಿಗೆ; ಆದರೆ ಮನುಷ್ಯನಿಗೆ ಮಾತ್ರ ಒಂದೇ ಬಾಲ್ಯ ಒಂದೇ ಹರೆ ಏಕೆ ?

೫. ನಿದ್ದೆಗೊಮ್ಮೆ ನಿತ್ಯಮರಣ, ಎದ್ದಾಗ ಮತ್ತೆ ಹುಟ್ಟಿಬಂದಂತೆ ನಮಗೆ ಏಕೆ ಬಾರದು ಎಲೆ ಸನುತ್ಕುಮಾರ ದೇವ, ಎಲೆ ಚಿರಂಜೀವ ನಿನಗೆ ಇಂತಹ ಲೀಲೆ ಸೇರದೇನು ?

೬. ಯುಗಾದಿ ಕಳೆದು ಯುಗಾದಿ ಬರುತ್ತಿದೆ. ಹೊಸ ವರುಷಕ್ಕೆ ಹೊಸ ಹರುಷವನ್ನು ತರುತ್ತಿದೆ. ಆದರೆ ನಮ್ಮನ್ನು ಮಾತ್ರ ಮರೆತಿದೆ.

**ಕಠಿಣ ಶಬ್ದಗಳ ಅರ್ಥ**

ತೊಂಗಲು—ಗೊಂಚಲು. ಭೃಂಗ—ಗುಂಗೀಹುಳ. ಕಮ್ಮನೆ—ಕಮ್ಮಗೆ; ಕಂಪುಳ್ಳ. ಹೂತು—ಹೂಬಿಟ್ಟು. ಕೋದಿವೆ—ಮಾಲೆಕಟ್ಟಿವೆ. ಜೀವಜಾತಕ್ಕೆ—ಜೀವವುಳ್ಳ ಎಲ್ಲ ವಸ್ತುಗಳಿಗೆ.

**ಪ್ರಶ್ನೆ-ಉತ್ತರ**

**ಪ್ರಶ್ನೆ :** ೧ ಯುಗಾದಿಯಲ್ಲಿ ಹೂಬಿಡುವ ಯಾವ ಗಿಡ ಗಂಟೆಯನ್ನು ಕವಿಯು ಇಲ್ಲಿ ಹೇಳಿರುವನು ?

**ಉತ್ತರ :** ಹೊಂಗೆ, ಬೇವು, ಮಾವು, ಮಲ್ಲಿಗೆ ಇವುಗಳ ಬಗ್ಗೆ ಕವಿಯು ಹೇಳಿರುವನು.

**ಪ್ರಶ್ನೆ :** ೨ ಯುಗಾದಿ ಯಾವ ಋತುವಿನಲ್ಲಿ ಬರುವುದು ? ಆಗ ನಿಸರ್ಗದಲ್ಲಿ ಕೇಳಬರುವ ಸಂಗೀತವು ಯಾವುದು ?

**ಉತ್ತರ:** ಯುಗಾದಿಯು ವಸಂತ ಋತುವಿನಲ್ಲಿ ಬರುವುದು. ಆಗ ಎಲ್ಲೆಡೆಯಲ್ಲಿ ಹೂತಿರುವುದು. ಅದಕ್ಕೆ ಗಂಗೀ ಹುಳಗಳ ಸಂಗೀತವು ಕೇಳಿ ಬರುವುದು.

**ಪ್ರಶ್ನೆ :** ೩ ಮಾನವ ಜೀವನಕ್ಕೂ ಅಖಿಲ ಜೀವ ಜಾತಕ್ಕೆ ಇರುವ ವ್ಯತ್ಯಾಸವೇನು ?

**ಉತ್ತರ :** ಉಳಿದ ಜೀವ ಜಾತವು ವರುಷಕ್ಕೊಮ್ಮೆ ಹುಟ್ಟುವುದು. ಬೆಳೆವುದು, ಮಡಿಯುವುದು. ಆದರೆ ಮಾನವನು ಹಾಗಲ್ಲ; ಅವನ ಜೀವನದುದ್ದಕ್ಕೂ ಒಂದೇ ಹುಟ್ಟು, ಒಂದೇ ಬಾಲ್ಯ, ಒಂದೇ ಹರೆಯ ಒಂದೇ ಮರಣ ಇದೇ ಕಂಡು ಬರುವ ವ್ಯತ್ಯಾಸವು.

**ಪ್ರಶ್ನೆ :** ೪ ಜನನ ಮರಣಗಳ ವಿಷಯದಲ್ಲಿ ಕವಿಯ ಹಿರಿ ಹಂಬಲವು ಯಾವುದು ?

**ಉತ್ತರ :** ಮಲಗಿದಾಗ ಮರಣ ಎದ್ದಾಗ ಹೊಸ ಹುಟ್ಟು; ಮಾನವನಿಗೆ ಏಕೆ ಬಾರದು? ಹೊಸತು-ವರುಷ ಉಳಿದ ಜೀವ ಜಾತಿಗೆ ಬಂದಿದೆ. ಮಾನವನ್ನೇ ಮರೆತಿದೆ.

**ಅಭ್ಯಾಸ :** ೧. ಭೃಂಗ, ಗಿಳಿ, ಕೋಗಿಲೆ.
೨ ಒದಿರಿ.



# ೪ ತೊರೆದು ಜೀವಿಸಬಹುದೆ ?

**ಈ ಕವಿತೆಯ ವಿಷಯವು ಯಾವುದು ?**

ಭಕ್ತನಿಗೆ ಭಗವಂತನ ಸಾನ್ನಿಧ್ಯವು ಯಾವಾಗಲೂ ಬೇಕು. ಅವನನ್ನು ಬಿಟ್ಟು ಅವನಿಗೆ ಜೀವನವಿಲ್ಲ. ಆದರೆ ಏನು ಬಿಡಲು ಭಕ್ತನು ಸಿದ್ಧನಿರುವನು, ಎಂಬುವನ್ನು ಇಲ್ಲಿ ಹೇಳಿದೆ. ಯಾವುದನ್ನು ಬೇಡಲು ಸಿದ್ಧವಿಲ್ಲವೆಂಬುದನ್ನು ಹೇಳಲಾಗಿದೆ.

**ಈ ಪಾಠದ ಸಾರಾಂಶ**

**ಪಲ್ಲ** : ಹರಿಯೆ ನಿನ್ನ ಚರಣವನು ತೊರೆದು ಜೀವಿಸಬಹುದೆ ? ಎಲೈ ಕರುಣಾಸಾಗರನೇ ಕೈಹಿಡಿದು ನನ್ನನ್ನು ಸಲಹು.

೧ ತಾಯಿ ತಂದೆಯನ್ನು ಬಿಟ್ಟು ತಪಸ್ಸು ಮಾಡಲುಬಹುದು. ಅಣ್ಣತಮ್ಮಂದಿರನ್ನು ಬಿಡಬಹುದು. ರಾಜನು ಸಿಟ್ಟಿಗೆದ್ದರೆ ಅವನ ರಾಜ ವನ್ನು ಬಿಟ್ಟು ಹೋಗಲುಬಹುದು. ಆದರೆ ಹರಿಯೆ ನಿನ್ನ ಅಡಿಯನ್ನು ಬಿಡಲು ಆಗದು.

೨ ಹೊಟ್ಟೆಹಸಿದರೂ ಅನ್ನವನ್ನು ಬಿಡಬಹುದು. ಮಾತೃಭೂಮಿಯನ್ನು ಬಿಟ್ಟು ಕೂಡ ಹೋಗಬಹುದು. ಹೆಂಡತಿ ಮಕ್ಕಳನ್ನು ಬಿಟ್ಟು ಹೋಗಬಹುದು. ಆದರೆ ಹರಿಯೆ ನಿನ್ನ ಅಡಿಗಳನ್ನು ಕ್ಷಣಹೊತ್ತು ಬಿಡಲು ಆಗದು.

೩. ಯಾರಾದರೂ ಪ್ರಾಣವನ್ನು ಬೇಡಿದರೆ ಕೊಡಬಹುದು. ಮಾನಾಭಿಮಾನವನ್ನು ಹತ್ತಿಕ್ಕಲುಬಹುದು. ಆದರೆ ಪ್ರಾಣನಾಯಕನಾದ ಆದಿಕೇಶವರಾಯನಾದ ಜಾಣ ಶ್ರೀಕೃಷ್ಣ ನಿನ್ನ ಅಡಿಯ ಬಿಡಲು ಆಗದು.

**ಕಠಿಣ ಶಬ್ದಗಳ ಅರ್ಥ**

ದಾಯಾದಿ—ಪೂರ್ವಜರ ಆಸ್ತಿಯಲ್ಲಿ ಪಾಲುಗಾರ ರಾಯ—ರಾಜ. ಕಾಯಜಪಿತ—ಕಾಮನ ತಂದೆ ಕೃಷ್ಣ. ಅಡಿ—ಪಾದ, ಒಡಲು—ಹೊಟ್ಟೆ. ತ್ಯಜಿಸು—ಬಿಡು. ತೊಲಗಿ—ಬಿಟ್ಟು ಹೋಗಿ. ಪ್ರಾಣನಾಯಕ—ಪ್ರಾಣವನ್ನು ನಡಸುವವ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಭಕ್ತನು ದೇವನಿಗಾಗಿ ತ್ಯಜಿಸಬಹುದಾದ ಬಂಧುಬಳಗದವರು ಯಾರು ?

**ಉತ್ತರ** : ತಾಯಿ, ತಂದೆ, ದಾಯಾದಿ, ಬಂಧುಗಳು ಮಡದಿ ಮಕ್ಕಳು. ಇವರನ್ನು ಭಕ್ತನು ದೇವನಿಗಾಗಿ ತ್ಯಜಿಸಬಹುದು.

**ಪ್ರಶ್ನೆ** : **೨** ಶ್ರೀಕೃಷ್ಣನ ಅಡಿಯನ್ನು ಅಗಲುವ ಪ್ರಸಂಗ ಒದಗಿದಾಗ ಭಕ್ತನು ಎಂತಹ ತ್ಯಾಗಕ್ಕೆ ಸಿದ್ಧನಾಗುವನು ?

ಉತ್ತರ : ತಂದೆ ತಾಯಿ, ದಾಯಾದಿ ಬಂಧುಗಳು, ಊರು ಕೇರಿ, ಆಹಾರ ಹೆಂಡತಿ ಮಕ್ಕಳು, ಅದೇಕೆ, ಪ್ರಾಣವನ್ನು ಕೂಡ ತ್ಯಾಗಮಾಡಲು ಸಿದ್ಧನಾಗುವನು.

ಪ್ರಶ್ನೆ: ೩ ದೇವನನ್ನು ಪಡೆಯಬೇಕಾದವನು ಯಾವಯಾವ ಮೋಹವನ್ನು ತ್ಯಜಿಸಬೇಕು.

ಉತ್ತರ : ಜನನಿ ಜನಕರ ಮೋಹ, ರಾಜ್ಯಮೋಹ, ಬಂದುವರ್ಗದ ಮೋಹ ಸತಿಸುತರ ಮೋಹ. ಭೂಮೋಹ ಇವುಗಳನ್ನು ತ್ಯಜಿಸಬೇಕಾಗುವುದು.



## ೫ ವಿಚಿತ್ರ ಹುಳ

**ಈ ಕವಿತೆಯ ವಿಷಯವು ಯಾವುದು ?**

ಹುಳವು ಜೀವನವನ್ನು ಹುಡಿಗೂಡಿಸುವುದು. ಆದರೆ ಯಾವ ಹುಳ ಅದು ? ಜಿಟ್ಟಿಯ, ಹೊನ್ನಿಯ ಹುಳವೆ, ಗುಂಗಾಡೇ, ಪಕ್ಕದ ಹುಳ. ಗೆದ್ದಲು ಹುಳ ಯಾವುದು. ಅವುಗಳ ಗುಣಗಳನ್ನು ಇಲ್ಲಿ ತೋರಲಾಗಿದೆ.

**ಈ ಪಾಠದ ಸಾರಾಂಶ**

೧. ಒಳ್ಳೆಯ ಬೆಳೆಗಳನ್ನು ತಿಂದು .ಅವುಗಳನ್ನು ಪೊಳ್ಳು ಮಾಡುತ ಬರಗಾಲವನ್ನು ತರುವುದು ಜಿಟ್ಟಿಯ ಹುಳ. ಹಳ್ಳಿಗರ ಸಂತೋಷವನ್ನು ದೋಚಿ ಕೊಂಡು ಹೋಗುವದು. ಕರಿಗಾಲ ಗುಣದ ಬಿಳಿ ಬಟ್ಟೆಯ ಹುಳ.

೨. ಬದುಕಿರುವಷ್ಟು ಸಮಯ ಕಿರಿಬೆಳಕು ಕೊಡುತ್ತ ಬೆಳಗುತ್ತ ಮುಗಿ ಲೊಳಗೆ ಹಾರುತ್ತಲಿರುವುದು ಹೊನ್ನಿಯ ಹುಳ. ಸೊಕ್ಕಿನಿಂದ ಬಡವರಕುತ್ತಿಗೆ ಹಿಸುಕಿ ಮಣ್ಣು ಗೂಡಿಸುವುದು. ಹೊನ್ನಿನ ( ಬಂಗಾರದ ) ಹುಳ.

೩. ನೀರ ಹರಿಯೊಳಗೆ ಇದ್ದು ಊರೊಳಗೆ ಚಳಿ ಜ್ವರವನ್ನು ಬೀರುವುದು. ಗುಂಗಾಡು ಹುಳ. ಎಲ್ಲೆಲ್ಲು ಬೆಂಕಿ ಹಚ್ಚಿ ಊರಿಗೆ ಊರನ್ನು ಸುಟ್ಟು ತಾನು ಜಾರು ವುದು ಚಾಡಿ ಎಂಬ ಹುಳ.

೪. ಹಸಿದು ಊಟ ಮಾಡುತ್ತಲಿರುವಾಗ ಬಿಸಿ ಅನ್ನದಲ್ಲಿ ಕಂಡು ಕಸವಿ ಸಿಯ ಪಡಿಸುವುದು ಬಾಲದ ಹುಳ. ಬಾಳುವೆಯ ಸಂಭ್ರಮವನ್ನು ಕಸಿದುಕೊಂಡು ಹಗಲು ಇರುಳು ಹೊಟ್ಟೆಯೊಳಗೆ ಚುಚ್ಚುವುದು ಸಾಲದ ಹುಳ.

೫. ಉರಿಯುತ್ತಿರುವ ದೀಪಕ್ಕೆ ಹಾಯಿದು ಕತ್ತಲೆಯನ್ನು ಮಾಡುವುದು ಪರ ಪೀಡಕವಾಗಿರುವ ಪಕ್ಕದ ಹುಳ. ಅರಿವಿನಿಂದ ಮೂಡಿದ ಬೆಳಕನ್ನು ಮರೆಯುವಂತೆ ಮಾಡುವುದು ಕುರುಡು ಧರ್ಮಾಚಾರವೆಂಬ ಕೊಕ್ಕೆಯ ಹುಳ.

೬. ಒಳ್ಳೆಯ ವಸ್ತು ಒಡವೆಗಳನ್ನು ತಿಂದು ಮಣ್ಣು ಮಾಡುವುವು ಗುದ್ದಿನೊಳಗೆ ಅಡಗಿರುವ ಗೆದ್ದಲು ಹುಳ. ಇದ್ದ ಬುದ್ಧಿಯನ್ನು ಮಾರಿಕೊಂಡು ಮಬ್ಬು ಕವಿದಂತೆ ಕೋಣೆಯೊಳಗೆ ಕೂತಿರುವ ಪುಸ್ತಕ ಹುಳ.

**ಕಠಿಣ ಶಬ್ದಗಳ ಅರ್ಥ**

ಸಂತಸ—ಸಂತೋಷ. ಕೊಳ್ಳೆಹೊಡೆ—ದೋಚಿಕೊಳ್ಳು. ಗರುವ—ಗರ್ವ. ಹೆಮ್ಮೆ—ಸೊಕ್ಕು. ಚಾಡಿ—ಕಿವಿಯೂದುವ ಚಟ. ಒಸಗೆ—ಸಂದೇಶ. ಬಸಿರು—ಹೊಟ್ಟೆ. ಪರಪೀಡಕ—ಇನ್ನೊಬ್ಬರಿಗೆ ತೊಂದರೆ ಕೊಡುವಂತಹ. ಅರಹು—ಅರಿವು. ಕುರುಡು ಧರ್ಮಾಚಾರ—ಭಾವಿಕತನದ ನಡೆವಳಿಕೆ. ಮೊದ್ದತನ—ಮಬ್ಬು. ಹೊತ್ತಿಗೆ—ಪುಸ್ತಕ.

**ಕಠಿಣ ವಾಕ್ಯಗಳ ಅರ್ಥ**

ಈ ಪಾಠದಲ್ಲಿ ೬ ಪದ್ಯಗಳು ಇವೆ. ಒಂದೊಂದು ಪದ್ಯದಲ್ಲಿ ನಾಲ್ಕು ಸಾಲು; ಮೊದಲು ಎರಡು ಸಾಲು ನಿಜವಾದ ಹುಳದ ಬಣ್ಣನೆ ಮಾಡುವುವು. ಮುಂದಿನ ಎರಡು ಸಾಲುಗಳು ಹುಳುವಿನ ಕೆಲಸ ಮಾಡುವ ಜನರ ಗುಣಗಳ ಬಗ್ಗೆ ಹೇಳುವುವು. ಜಿಟ್ಟೆ, ಹೊನ್ನಿನ ಹುಳ, ಗುಂಗಾಡು, ಬಾಲದ ಹುಳ, ಪಕ್ಕದ ಹುಳ, ಗೆದ್ದಲು ಇವು ನಿಜವಾಗಿ ಇರುವ ಹುಳಗಳು. ಬಿಳಿಯ ಬಟ್ಟೆಯ ಹುಳ–ಕಲಿತವರೆಂಬುವವರು. ಬಿಳಿಭಾಯಿ ಜನ. ಹೊನ್ನಿನ ಹುಳ—ಸಿರಿವಂತರು. ಚಾಡಿಯಹುಳ—ಚಾಡಿ ಹೇಳುವ ಜನ. ಸಾಲವೆಂಬ ಹುಳ. ಕುರುಡುಧರ್ಮಾಚಾರವೆಂಬ ಕೊಕ್ಕೆಯ ಹುಳ ವ್ಯವಹಾರವೆಂದರೇನೆಂಬುದನ್ನು ಅರಿಯದ ಪುಸ್ತಕದ ಹುಳ. ಎರಡೂ ಮಾದರಿಯ ಹುಳಗಳಿಂದ ಮಾನವ ಸಮಾಜಕ್ಕೆ ತೊಂದರೆ.

**ಪ್ರಶ್ನೆ—ಉತ್ತರ**

ಮೇಲಿನ ಅರ್ಥವಿವರಣೆಯಿಂದ ಈ ಮೂರು ಪ್ರಶ್ನೆಗಳಿಗೆ ಉತ್ತರ ಬರೆಯಲು ನಿಮಗೆ ಬರಬೇಕು. ಅದ್ದರಿಂದ ಉತ್ತರಗಳನ್ನು ನೀವೇ ಬರೆಯಿರಿ. ಹುಳ ಕಣ್ಣಿಗೆ ಕಾಣಲು ಸಣ್ಣದು. ಆದರೆ ಅದರ ಪರಿಣಾಮ ಬಹಳ ಕೆಟ್ಟದು ಎಂಬುದನ್ನು ಅರಿತು ಉತ್ತರ ಬರೆಯಿರಿ. ಹುಳವು ಹುಳವಾಗಿರುವುದು ಅದರ ತಪ್ಪಲ್ಲ. ಆದರೆ ಮಾನವನು ಹುಳುವಿನ ಹಾಗೆ ಆಗುವನಲ್ಲ ಎಂಬ ಕಳವಳ ಕವಿಗೆ ಆಗಿ ಮಾನವನ ದುರ್ಗುಣಗಳನ್ನು ಹುಳಕ್ಕೆ ಹೋಲಿಸಿ ಪದ್ಯ ಬರೆದಿದ್ದಾನೆ.



# ೬ ತೆಂಕಣ ಗಾಳಿಯಾಟ.

### ಈ ಕವಿತೆಯ ವಿಷಯವು ಯಾವುದು ?

ಕಣ್ಣಿಗೆ ಕಾಣದ ಗಾಳಿ ಬರುವುದೂ ಆಟವಾಡುವುದೂ ಕಾಣುವುದು ಹೇಗೆ ? ಗಾಳಿಯ ಪರಿಣಾಮ ಕಂಡು ಬರುವ ವಸ್ತುಗಳ ಗತಿಗಳ ಮೇಲಿಂದ ತಿಳಿಯಬೇಕು. ತೆಂಕಣ ಗಾಳಿಯಾಟ ಹೇಗಿದೆ ಎಂಬುದನ್ನು ಇಲ್ಲಿ ಹೇಳಿದೆ. ಗಾಳಿಯ ವೇಗವು ಇಲ್ಲಿಯ ಶಬ್ದಗಳ ಜೋಡಣೆಯಲ್ಲಿ ಮೂಡಿದೆ. ಅದನ್ನು ಲಕ್ಷಿಸಬೇಕು.

### ಈ ಪಾಠದ ಸಾರಾಂಶ

೧. ಬರಲಿದೆ, ದೂರದಿ ಬರಲಿದೆ. ಬುಸುಗುಟ್ಟುವ ಪಾತಾಳದ ಹಾವೋ ? ಇದೇನು ಹಸಿವೆಯ ಭೂತದ ಕೂವೊ, ಕಾಲನಕೋಣದ ಓವೊ, ಉಸುರಿನ ಸಪ್ಪಳವೊ? ಸೂಸೂಕರಿತ ಭರದಲ್ಲಿ ಬರುವುದು.

೨. ಬೊಬ್ಬೆಯ ಹಬ್ಬಿಸಿ ಕಡಲಿನ ನೀರಿಗೆ ಉಬ್ಬರ ಬರಿಸಿ, ತೆರೆಯನ್ನು ದಡಕ್ಕೆ ಹೊಮ್ಮಿಸಿ ಅಬ್ಬರದಲ್ಲಿ ಗುಮ್ಮಿಸಿ ಬರುತಿದೆ, ವೈತೋರದೆ ಬರುತಿದೆ.

೩. ನಾವೆಯ ನಡಮುರಿಯುತ, ಹಾಯಿಯ ಹರಿಯುತ ಹಡಗನು ಕೀಲಿಸಿ ತುಮುರನು ತೇಲಿಸಿ ದೋಣಿಯ ನಾಡಿಸಿ ಬರುತಿದೆ.

೪. ಹಕ್ಕಿಯ ಕಣ್ಣಿಗೆ ಧೂಳು ಮುಸುಕಿಸಿ ಹೊಲದೆತ್ತನ್ನು ಕಾಡಿನ ದನಗಳನ್ನು ಹಕ್ಕಿಗೆ ಅಟ್ಟಿಸಿ ಕಾಡಿಗೆ ಹತ್ತಿದ ಬೆಂಕಿಯನ್ನು ಊದುತ್ತ ಬರುತ್ತಿದೆ.

೫. ಹೆಂಗಸರ ಉಡಿಯನು ಮುಡಿಯನು ಸಡಲಿಸಿ, ಮುದುಕರ ಕೊಡೆಯನ್ನು ಹರಿದಾಡಿಸಿ, ಹುಡುಗರ ಟೊಪ್ಪಿಗೆಯನ್ನು ಹಾರಿಸಿ, ಮನೆತೋಟಗಳನ್ನು ಹೊಯ್ದಾಡಿಸಿ ತೆಂಗನ್ನು ಬಾಗಿಸಿ ಅಡಿಕೆಯ ಗಿಡವನ್ನು ತೂಗಿಸಿ ಗುಡಿಸಿಲ ಚಪ್ಪರಗಳನ್ನು ಹೊಯ್ದಾಡಿಸಿ ಬಂತೈ.

೬. ಗಿಡದಿಂದ ಚೆಲುವಾದ ಗೊಂಚಲು ಮಿಂಚುತಿವೆ. ಹಣ್ಣುಮಿಡಿಗಳನ್ನು ಉದುರಿಸುತಿದೆ, ಅಲ್ಲಲ್ಲೆಲ್ಲ ಹಂಚುತ, ಮಿಂಚನ್ನು ಹೊಳೆಯಿಸಿ, ತಾಳೆಬಾಳೆ ಗಿಡಗಳಿಗೆ ಸಿಡಿಲನು ತಾಗಿಸಿ, ಜಡಿಮಳೆ ಸುರಿವಂತೆ, ಬಿರುಮಳೆ ಬರುವಂತ್ತೆ, ಬೀಸುತ್ತ ಬಂತೈ, ತೆಂಕಣ ಗಾಳಿಯು ಕೊಂಕಣ ಸೀಮೆಗೆ ಬಂತೈ ಬಂತೈ.

### ಕಠಿಣ ಶಬ್ದಗಳ ಅರ್ಥ

ತೆಂಕಣ—ದಕ್ಷಿಣ. ಕಾಲನಕೋಣ—ಯಮನಕೋಣ. ಬೊಬ್ಬೆ—ಸಪ್ಪಳ ಉಬ್ಬರ—ಉಕ್ಕೇರುವುದು. ಹೊಮ್ಮಿಸಿ—ಹೊರಡಿಸಿ. ಗುಮ್ಮಿಸಿ—ಅಪ್ಪಳಿಸಿ. ಹಾಯಿ—ಹಡಗಿನ ಗಾಳಿಪಟ. ಕೀಲಿಸಿ—ಕಿತ್ತಿ. ತುಮುರ—ಹಡಗದ ಧ್ವಜಸ್ತಂಭದ ತುಣುಕು. ಕಿಚ್ಚು—ಬೆಂಕಿ. ಪನೆ—ತಾಳೆಮರ. ಮಾಡ—ಚಪ್ಪರ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ದೂರದ ಗಾಳಿ ಸನಿಹಕ್ಕೆ ಹೆಜ್ಜೆಹೆಜ್ಜೆಯಾಗಿ ಬರುವಂತೆ ಕವಿಯು ಹೇಗೆ ಸೂಚಿಸುವನು ?

**ಉತ್ತರ :** ಮೊದಲು ಸಪ್ಪಳ ಕೇಳಿ ಬರುತ್ತಿದೆ. ಅದರ ವರ್ಣನೆ ಮಾಡುವನು. ನಂತರ ಕಡಲು ಹೊಯ್ದಾಡುಡುವುದು. ಅದರ ವರ್ಣನೆ ಮಾಡುತ್ತಾನೆ. ನಂತರ ದಂಡೆಯಲ್ಲಿರುವ ಗಿಡು ಮರಗಳು ಹೊಯ್ದಾಡುವುವು. ನಂತರ ಕೊಂಕಣದ ಒಳ ಸೀಮೆಯ ಗಿಡ-ಮರ-ಮನೆಗಳು ಹೊಯ್ದಾಡುವುವು. ಇಷ್ಟಾದ ಮೇಲೆ ಬಿರುಗಾಳಿಯ ಮಳೆಯಂತೆ ಬಂದೇ ಬಿಟ್ಟಿತು. ಎಂದು ಹೇಳಿ ಹೆಜ್ಜೆ ಹೆಜ್ಜೆಗೆ ಆಗುವ ಪರಿಣಾಮಗಳನ್ನು ವರ್ಣಿಸುವನು.

**ಪ್ರಶ್ನೆ : ೨** ದೂರದಿಂದ ಬರುವ ಗಾಳಿಯು ಕವಿಗೆ ಹೇಗೆ ಚಿತ್ರ ವಿಚಿತ್ರವಾಗಿ ತೋರುತ್ತಿದೆ ?

**ಉತ್ತರ :** ದೂರದಿಂದ ಗಾಳಿ ಬರುತ್ತಿರುವಾಗ ಸಪ್ಪಳ ಮಾತ್ರ ಕೇಳುವುದು. ಆ ಸಪ್ಪಳದ ರಭಸವನ್ನು ಹೇಗೆ ತಿಳಿವುದು. ಇದೇನು ಪಾತಾಳದ ಹಾವಿನ ಬುಸುಗುಟ್ಟುವ ಸಪ್ಪಳವೊ ಇಲ್ಲವೆ ಹಸಿನ ಭೂತವು ಕೂಗುವ ಸಪ್ಪಳವೊ ಇಲ್ಲವೆ ಯಮನ ಕೋಣ ಒದರುವ ಸಪ್ಪಳವೊ. ಎಂದು ತಿಳಿಯದಹಾಗೆ ಚಿತ್ರವಿಚಿತ್ರವಾಗಿ ಸಪ್ಪಳ ಕೇಳಿಬರುತ್ತಿದೆಯೆಂದು ಹೇಳಿದ್ದಾನೆ.

**ಪ್ರಶ್ನೆ : ೩** ಗಾಳಿಯ ರಭಸದ ಪ್ರಭಾವವು (೧) ಸಾಗರ (೨) ಹಡಗ (೩) ದನಕರು (೪) ಹುಡುಗರು ಇವರ ಮೇಲೆ ಯಾವ ರೀತಿಯಲ್ಲಿ ಕಂಡುಬರುವುದು.

**ಉತ್ತರ :** ಕಡಲು ಉಕ್ಕೇರುವುದು; ತೆರೆಗಳು ಬಂದು ದಂಡೆಗೆ ಅಪ್ಪಳಿಸುವುವು. ಭಯಾನಕವಾದ ಅಬ್ಬರವು ಉಂಟಾಗುವುದು (೨) ಹಡಗದ ನಡು ಮುರಿಯಬಹುದು; ಅದರ ಗಾಳಿ ಪಟ ಹರಿಯಬಹುದು; ಬುಡಮೇಲಾಗಬಹುದು. (೩) ದನಕರುಗಳು ಗಾಳಿಯ ಅಬ್ಬರಕ್ಕೆ ಬೆದರಿ ಧೂಳಿನಿಂದ ಕಣ್ಣುಮುಚ್ಚಿ ಮನೆಯ ಕಡೆಗೆ ಓಡುವುವು. (೪) ಹುಡುಗರ ಟೊಪ್ಪಿಗೆ ಹಾರಿಹೋಗುವುದು. ಹುಡುಗರು ಅವನ್ನು ಬೆನ್ನಟ್ಟುವರು. ಅದೊಂದು ಅವರಿಗೆ ಆಟ. ಹೀಗೆ ಗಾಳಿಯ ಪರಿಣಾಮ ವಿಧವಿಧವಾಗಿ ಕಂಡುಬರುವುದು.

**ಪ್ರಶ್ನೆ : ೪** ತೆಂಕಣ ಗಾಳಿಯು ತನ್ನ ಜತೆಗೆ ಏನನ್ನು ತರುವುದು ?

**ಉತ್ತರ :** ತೆಂಕಣಗಾಳಿಯು ಮಿಂಚು, ಸಿಡಿಲು, ಮಳೆಯನ್ನು ತನ್ನ ಜತೆಗೆ ತರುವುದು.

**ಅಭ್ಯಾಸ :** ೨ ಗುಬ್ಬಿ **ಭುರ್** ಎಂದು ಹಾರುವುದು. **ದಬಧಬ** ಬಾಗಿಲು ಬಡಿದನು. ಮೇಲಿನ ವಸ್ತು ಕೆಳಗೆ **ಪಟ್ಟನೆ** ಬಿದ್ದಿತು. **ಗಣಗಣ** ಗಂಟೆಬಾರಿಸಿತು.

೨ ಗೆಜ್ಜೆಯ ಗಿಲ್‌ಗಿಲ್ ಮಾಡುತ ಬಂದಳು ನರ್ತಕಿ. ಹಳ್ಳದನೀರು ಜುಳು ಜುಳು ಹರಿಯುತ್ತಿತ್ತು. ಸಭಿಕರು ಖೊಕ್ ಖೊಕ್ ಎಂದು ನಕ್ಕರು. ಘುರುಘುರು ನಿದ್ದೆ ಹೊಡೆದರು.



## ೭ ಹೊಸಕಾಲದ ನವಿಲು

### ಈ ಕವಿತೆಯ ವಿಷಯ ಯಾವುದು ?

ಇದು ಸಾದಾ ನವಿಲು ಅಲ್ಲ. ಹೊಸಕಾಲವೆಂಬ ನವಿಲು. ಅದಕ್ಕೆ ಇಲ್ಲಿ ಎರಡರ್ಥದ ಮಾತುಗಳು ಇರುವುವು. ಮಳೆಗಾಲದ ವೈಭವವೇನು ? ಹೊಸಕಾಲವು ತಂದು ಕೊಡುವ ಸಂಗತಿಗಳು ಯಾವು ?

### ಈ ಪಾಠದ ಸಾರಾಂಶ

೧ ಮನದಣಿ ಕುಣಿಯುತ್ತಿದೆ, ಮರಡಿಯ ಮೇಲೆ ಹರುಷದಲ್ಲಿ ಹಾರುತ್ತ ಹೊಸಕಾಲದ ನವಿಲು ಕೇಕೆಯ ಹಾಕುತ್ತಲಿದೆ. ಬೇಸಿಗೆಯ ಬೇಗೆಯು ಹಳೆಯದನ್ನು, ತನ್ನ ಸಾವಿರ ನಾಲಗೆಯಿಂದ ಸವರಿ ಭೂಮಿಯನ್ನು ಎರೆಯಿಲಿಕೆಯೆಂದು ತಾಯಿಯ ತವಕದಿ ನಾನಾರೂಪದಿಂದ ಮಳೆಯ ತಾಯಿಯು ಬೇಗ ಬಂದಿರುವಳು. ಅದಕ್ಕಾಗಿ ಹೊಸಕಾಲದ ನವಿಮಿ ಹಗಲಿರುಳು ಕುಣಿಯುವುದು.

೨. ಮಳೆಗಾಲವು ಬಂದಿತು. ಅದು ಅಳಿಗಾಲವೂ ಅಹುದು. ಅಷ್ಟರಲ್ಲಿ ಅಡವಿಯೊಳಗಿನ ಪಕ್ಷಿಗಳು ತಾವೇ ಮಾಡಿಕೊಂಡಿರುವ ಗೂಡುಗಳನ್ನು ಸೇರುತ್ತವೆ. ಆದರೆ ಮಳೆಗಾಲದಿಂದ ನೊಂದುಕೊಳ್ಳದೆ ಒಂದೆ ಒಂದಾಗಿ ನಿಂತಿರುವುಳು ಹೊಸ ಕಾಲದ ನವಿಲು.

೩. ಬೇಸಿಗೆ ಬಿಸಿಲಲಿ ಮರಗಳು ಮೆರೆದವು. ನೆಳಲಿನಿಂದ ಜಗವನ್ನು ಪೊರೆದವು. ಹಿರಿತನದಿಂದಲಿ ನಿಂತಿರುವುವು ಆ ಮರಗಳು. ಆದರೆ ಭೂಮಿ ಬಿರಿಯುವ ಹಾಗೆ ಬಿರು ಮಳೆ ಬಂದಿರುವಾಗ ಅವು ಕೂಡ ಅದುರಿದುವು.ಅದನ್ನು ನೋಡಿ ಹೊಸ ಕಾಲದ ನವಿಲು ತನನ ಉಲಿವುದು.

೪. ಹಸಿರನು ತಂದಿತು. ಸಸಿಯನು ತಂದಿತು. ಹೊಸ ಹೊಸ ಹೂ ಹಣ್ಣುಗಳ ಕಣ್ಣು ತೆರೆಯಿತು. ಬಿರುಸಾದ ನೆಲದಲ್ಲಿ ಕೂಡ ಹಸಿರನು ಮೂಡಿಸಿತು. ಇದು ಹೊಸ ಕಾಲವೆಂದು ಆನಂದದಿಂದ ಮರುಳು ಮೈಮರೆತಿದೆ. ಹೊಸ ಕಾಲದ ನವಿಲು ಹಗಲಿರುಳು ಕುಣಿಯುತ್ತಿದೆ.

೫. ಕೊಳೆತ, ಹುಳಿತ, ಕಂದಿಹ, ಕಮರಿದ ಹಳೆಯದನೆಲ್ಲವನ್ನು ಗಳಕ್ಕನೆ ನುಂಗಲು ಮಳೆ ಮೋಡದ ರಾಕ್ಷಸರು ಬಂದರು. ಮಿಂಚುವ ಹಲ್ಲುಗಳನ್ನು ಆಡಿಸು

ವರು. ಆದರೂ ಆನಂದದಿಂದ ಹಗಲಿರುಳು, ದಣಿಯದಲೆ ನಿಲ್ಲುವುದು, ಈ ಹೊಸ ಕಾಲದ ನವಿಲು.

೬. ಆಕಾಶದ ಬಯಲಿನಲ್ಲಿ ನಡೆದಿರುವುದು ಯುದ್ಧ; ಗುಡುಗು ಕಾಣದು. ಅವರ ಗುಟ್ಟನ್ನು ಕಂಡಂತೆ ವೈಭವದ ವಾದ್ಯವಿದು ಎಂದು ತಿಳಿದು ತಾನೆಯೆ ಈ ಹೊಸ ನಾಡಿನ ರಾಜನೆಂದು ತಿಳಿದುಕೊಂಡು ತಲೆಯಲ್ಲಿ ಕೊಡೆಯಿರಿಸಿಕೊಂಡು ಹಗಲಿರುಳು ಆನಂದ ಪಡುವುದು ಈ ಹೊಸ ಕಾಲದ ನವಿಲು.

೭. ಮೋಡಗಳು ಸ್ವಲ್ಪ ಸರಿದು ಸೂರ್ಯನನ್ನು ತೋರಿಸುವುವು. ಅದು ಹೊಸನಗೆ ತರುವುದು. ಆಗ ಬಗೆ ಬಗೆ ಬಣ್ಣದ ಗರಿಯನ್ನು ತೆರೆಯುತ್ತ ತಾಲ ಹಿಡಿದು ಕಾಲುಗಳನ್ನು ಮೆಲ್ಲನೆ ಕುಣಿಸುವುದು ಈ ಹೊಸಕಾಲದ ನವಿಲು.

೮. ಗರಿಯಲ್ಲಿ ವಿವಿಧ ಬಯಕೆಗಳು ಇವೆ. ನಡದಲ್ಲಿ ಸೆಡವು ಇದೆ. ಬರುತ್ತಿಹ ಬೆಳೆಯ ಸೂಚನೆಯನ್ನು ತಲೆಯಲ್ಲಿ ಧರಿಸಿದೆ. ಎಲ್ಲರನ್ನೂ ಕರೆಯುವಂತೆ ಕೇಕೆಯನ್ನು ಹಾಕುತ್ತ ಹಗಲಿರುಳು ಕುಣಿವುದು ಹೊಸಕಾಲದ ನವಿಲು; ಇದು ಬೆಳೆಗಾಲದ ಕುರುಹು.

### ಕಠಿಣ ಶಬ್ದಗಳ ಅರ್ಥ

ಮರಡಿ—ದಿಬ್ಬ. ಸಾಸಿರ—ಸಾವಿರ. ತವಕ—ಆತುರ. ಕಾರಿನ—ಮಳೆಯ. ಅಳಿಗಾಲ—ತೊಳೆದುಹೋಗುವ ಕಾಲ. ಬನದ್ವಿಜವೃಂದ—ಹಕ್ಕಿಗಳು. ತಿರೆ—ಭೂಮಿ. ಹಸೆ—ಹಸಿರು. ಕಸುಕು—ಗಟ್ಟಿ. ರಕ್ಕಸ—ರಾಕ್ಷಸ. ಬವರ—ಯುದ್ಧ. ಬಿಂಕ—ಸೊಕ್ಕು.

### ಪ್ರಶ್ನೆ—ಉತ್ತರ

**ಪ್ರಶ್ನೆ : ೧** ಮಳೆಗಾಲವು ಹೇಗೆ ಬರುವುದು ?

**ಉತ್ತರ :** ಬೇಸಗೆ ಬೇಗೆಯನ್ನು ಕಳೆವುದು. ಹಳೆಯದನೆಲ್ಲವನ್ನೂ ಸವರುವುದು. ಹೊಸ ಚೇತನ ಬರಲು ಭೂಮಿಯನ್ನು ಹೂಸಿ ಎರೆಯಬೇಕೆಂದು ತಾಯಿಯ ಆತುರದಲ್ಲಿ ಸಾವಿರ ರೂಪುತಾಳಿ ಮಳೆಯು ಬರುವುದು.

**ಪ್ರಶ್ನೆ : ೨** ಪಕ್ಷಿಗಳು ಗೂಡು ಸೇರಿದುವು ಎಂಬುದನ್ನು ಕವಿಯು ಹೇಗೆ ಹೇಳಿದ್ದಾನೆ ?

**ಉತ್ತರ :** ಮಳೆಗಾಲವೆಂದರೆ ಅಳಿಗಾಲವು ಎಂದು ತಾವೇ ಮಾಡಿದ ಗೂಡುಗಳಲ್ಲಿ ಪಕ್ಷಿಗಳು ಸೇರಿದವು. ಇದು ಅವುಗಳಿಗೆ ಒಂದು ಬಗೆಯ ಸೆರೆಮನೆ ವಾಸವಿದ್ದಂತೆ. ಬದುಕುವುದಕ್ಕಾಗಿ ಬಂಧನವನ್ನು ತಾವೇ ಪಡೆದುವು. ಎಂದು ಕವಿಯು ಹೇಳುತ್ತಾನೆ.

**ಪ್ರಶ್ನೆ : ೩** ಗಿಡಗಳ ಹಿರಿತನ ಏತರಲ್ಲಿದೆ ?

**ಉತ್ತರ:** ತನ್ನ ಆಸರಕ್ಕೆ ಬಂದವರಿಗೆ ನೆರಳು ಕೊಡುವುದು ಹಿರಿತನದ ಲಕ್ಷಣ; ಉಳಿದ ಹೂ ಹಣ್ಣು ಹೊಸತಾಗಿ ಹುಟ್ಟುವುವು ಅದಕ್ಕೆ ಅವು ಚಿಕ್ಕವು. ಮರಗಳು ಮಾತ್ರ ಹಾಗೆಯೆ ನಿಂತಿರುವುವು. ಇದು ಹಿರಿತನದ ಲಕ್ಷಣ. ಇದರಲ್ಲಿಯ ಗಿಡಗಳ ಹಿರಿತನವಿದೆ.

**ಪ್ರಶ್ನೆ : ೪** ಹೊಸಕಾಲವು ನಮಗೆ ತಂದುಕೊಡುವ ಸಂಗತಿಗಳು ಯಾವುವು?

**ಉತ್ತರ :** ಎಲ್ಲೆಲ್ಲೂ ಹಸಿರು; ಸಸಿಗಳು; ಹೊಸ ಹೂ ಹಣ್ಣು. ಕಸುಕಾಗಿದ್ದ ನೆಲವು ಕೂಡ ಹಸಿರು ಮುರಿಯತೊಡಗುವುದು. ಇದೆಲ್ಲ ಹೊಸಕಾಲವೆಂದು ತೋರುವುದು. ಆಗ ಕಾಣುವ ಸಂಗತಿಗಳು ಇವು.

**ಪ್ರಶ್ನೆ : ೫** ನವಿಲು ತಲೆಯಲ್ಲಿ ಇರಿಸಿಕೊಂಡ ಕೊಡೆಯಾವುದು ?

**ಉತ್ತರ :** ತಲೆಯ ಮೇಲೆ ಇರುವುದು ತುರಾಯಿ, ದೊರೆಯಾಗಿದೆಯೆಂದು ತಿಳಿದಾಗ ಅದು ಛತ್ರವಾಗಬೇಕಲ್ಲ! ಅದಕ್ಕೆ ಅದೆ ಕೊಡೆಯಾಗಿರುವುದು.

**ಅಭ್ಯಾಸ :** ಸಾಸಿರ ರೂಪದಿ ಕಾರಿನ ಸೀರೆಯು : ರಕಾರಬಂದಿದೆ.
ಕಸುಕಿನ ನೆಲದಲಿ ಹಸುರನು ಹಾಸಿತು : ಸಕಾರಬಂದಿದೆ,
ಕೊಳಿತಿಹ ಹುಳುತಿಹ ಕಂದಿಹ ಕಮರಿಹ : ಹಕಾರಬಂದಿದೆ.



## ೮ ಬನವಸೆ

**ಈ ಕವಿತೆಯ ವಿಷಯವು ಯಾವುದು ?**

ಬನವಾಸಿಯ ವೈಭವವೇನು ? ಅಲ್ಲಿನ ನಿಸರ್ಗರಮಣೀಯತೆಯು ಹೇಗದೆ ? ಅಲ್ಲಿಯ ನಾಡಿನ ಜನರ ಸದ್ಗುಣಗಳು ಯಾವು ? ಮುಂತಾಗಿ ಹೇಳಿದೆ.

**ಈ ಪಾಠದ ಸಾರಾಂಶ**

೧ ಸಕಲ ಶಿವಭಕ್ತರು ಇದನ್ನು ಕೇಳಿರಿ. ಮುಂದಿನ ಕಥಾವಿಸ್ತಾರವನ್ನು ಕೇಳಿರಿ. ಅಮರಾದ್ರಿಗೆ ಒಪ್ಪುವಂತಹದು ದಕ್ಷಿಣದಿಕ್ಕಿನಲ್ಲಿ ಸತ್ಯದಲ್ಲಿ ಸದ್ಭಕ್ತಿಯಲ್ಲಿ ಸದ್ವೃತ್ತಿಯಲ್ಲಿ, ಸಚ್ಚರಿತದಲ್ಲಿ ಸಂಪತ್ತಿನಲ್ಲಿ ಚೆನ್ನಾಗಿ ಮೆರೆಯುವುದು ಬೆಳುವಲ ದೇಶವು.

೨ ಅದರಲ್ಲಿ ಭೂಕಾಂತೆಗೆ ಒಪ್ಪುವ ಮುಖವೊ ಶೃಂಗಾರಸಾರದ ಮನೆಯೊ ಸೊಬಗಿನ ಸುಮಾನದ ಮತ್ತು ಸುಖದನೆಲೆವಿಡೋ ಒಳ್ಳೆಯ ಸ್ತ್ರೀರತ್ನಗಳನ್ನು ಹುಟ್ಟಿಸುವ ಚೆಲುವಿನ ಕಡಲೋ ಎನ್ನುವಂತೆ ಎಲ್ಲ ಸೌರಭದಿಂದ ಬನವಸೆ ಎಂಬ ಪಟ್ಟಣವು ಮೆರೆಯುತ್ತಿರುವುದು.

೩ ಯಾವುದೇ ಋತು-ಕಾಲ ಇರಲಿ. ಇಲ್ಲಿ ಹಲಸು ನೇರಿಲ, ಮಾವು, ದಾಡಿಂಬ, ತೆಂಗು, ನಾರಂಗ, ಮುಂತಾದ ಹಣ್ಣುಗಳು ದೊರೆವುವು. ಗಿಡಮರಗಳಲ್ಲಿ ಗಿಳಿ ಕೋಗಿಲೆಗಳು ಗುಂಗೀಹುಳಗಳು ಹಾರಾಡುತ್ತವೆ. ಇದರಿಂದ ನಾನಾವಿಧದ ಶೋಭೆಯುಂಟಾಗಿದೆ ಬನವಸೆಯ ಉದ್ಯಾನದಲ್ಲಿ.

೪ ಕೇರಿಕೇರಿಯಲ್ಲಿ ತಳಿರು ತೋರಣಗಳಿಂದ ಪರಿಮಳವು ಸೂಸುವುದು. ಸಾರಣೆ-ಕಾರಣೆ ಗಂಧೋದಕದ ಸಿಂಪಿಡಿಸುವಿಕೆ ಸುವಾಸನೆಯ ಹೂಮಾಲೆಗಳಿಂದ ಸಿಂಗರಿಸಿದ ಬೀದಿಗಳ ಸೊಬಗಿನ ಸಾರದಿಂದ ಬನವಸೆಯು ಬೆಳಗಿತು.

೫ ವೇದಶಾಸ್ತ್ರ ಆಗಮ ಪುರಾಣಗಳನ್ನು ಓದುವ ದನಿಯು ಖಳರೊಡನೆ ಕಾದಿಗೆಲಿದ ಅತಿಬಲರನ್ನು ಬೆನ್ನು ಕಟ್ಟುವ ದನಿಯಂತೆ ಬೀದಿ ಬೀದಿಗಳಲ್ಲಿ ವಿಕಟವಾದ ವಿರೋಧದ ಮದದಾನೆಯು ಗುಡುಗುವಂತೆ ಆ ಪುರವು ಸಪ್ಪಳದಿಂದ ಕೂಡಿತ್ತು.

೬ ನುಡಿಯುವ ಜಾಣರು, ನುಡಿದಂತೆ ನಡೆವ ಜಾಣರು, ರೀತಿಯನ್ನು ತಿಳಿಸುವ, ಅರ್ಥಿಗೆ ಅರ್ಥವನು ಕುಂದದಂತೆ ಕೊಡುವ ಜಾಣರು, ಪೊಡವಿಗೆ ಇದು ಹೊಸತು, ಎಂಬಂತಿರುವ ಕಿಕ್ಕಿರಿದಾಡುವ ಈ ಬನವಸೆಗೆ ಮಮಕಾರ ಭೂಪಾಲನು ಒಡೆಯನಾಗಿರುವನು.

**ಕಠಿಣ ಶಬ್ದಗಳ ಅರ್ಥ**

ಚಿತ್ತಯಿಸು—ಮನಗೊಟ್ಟು ಕೇಳು. ಅಮರಾದ್ರಿ—ದೇವತೆಗಳ ಪರ್ವತ; ಮೇರುಪರ್ವತ; ಹಿಮಾಲಯ. ವದನ—ಮುಖ. ಸದನ—ಮನೆ. ಸುದತಿ—ಒಳ್ಳೆಯ ಹಲ್ಲುಳ್ಳವಳು; ಸುಂದರಿ. ಪನಸು—ಹಲಸು. ನಾರಂಗ—ಕಿತ್ತಳೆ. ಶುಕಪಿಕ ಭ್ರಮರ—ಗಿಳಿ, ಕೋಗಿಲೆ, ಗುಂಗೀಹುಳ. ಉದ್ಯಾನ—ತೋಟ. ಚಳೆ—ಸಿಂಪಡಿಸುವಿಕೆ. ಪೂವಲಿ—ಪೂಮಾಲೆ. ಕಳನೊಳು—ಖಳನೊಳು. ವಿಗಡ—ವಿಕಟ. ಮದಗಜ ತತಿಯಬೃಂಹಿತ—ಮದಬಂದ ಆನೆಯ ಗುಡುಗು. ಕಳಕಳ—ಕಲಕಲ. ಅರ್ಥಿ—ಬೇಡುವವ. ಅರ್ಥ—ದುಡ್ಡು; ಧನ.

**ಪ್ರಶ್ನೆ—ಉತ್ತರ**

**ಪ್ರಶ್ನೆ:** ೧ ಬೆಳುವಲ ದೇಶವು ಯಾವ ಯಾವ ಸದ್ಗುಣಗಳಿಂದ ಸೊಗಯಿಸುತ್ತಿತ್ತು ?

**ಉತ್ತರ :** ಸತ್ಯ ಮಾತನಾಡುವುದು, ಸದ್ಭಕ್ತಿ ಮಾಡುವುದು, ಒಳ್ಳೆಯವೃತ್ತಿಯಲ್ಲಿರುವುದು, ಒಳ್ಳೆಯ ಶೀಲ ಸ್ವಭಾವದಿಂದಿರುವುದು, ಸಂಪತ್ತು ಇರುವುದು. ಇವುಗಳಿಂದ ಬೆಳುವಲ ದೇಶವು ಮೆರೆಯುತ್ತಿತ್ತು.

**ಪ್ರಶ್ನೆ :** ೨ ಬನವಸೆ ಪಟ್ಟಣವನ್ನು ಯಾವ ಯಾವ ವಸ್ತುಗಳಿಗೆ ಕವಿಯು ಹೋಲಿಸಿದ್ದಾನೆ ?

**ಉತ್ತರ :** ಭೂಕಾಂತೆಗೆ ಒಪ್ಪುವ ಮುಖ, ಶೃಂಗಾರರಸದ ಸಾರಗಳ ಆಗರ, ಸೊಬಗಿನ ಸಂತೋಷದ ಸುಖದ ನೆಲೆವೀಡು, ಸ್ತ್ರೀರತ್ನಗಳನ್ನು ಹುಟ್ಟಿಸುವ ಕಡಲು. ಇವುಗಳಿಗೆ ಕವಿಯು ಬನವಸೆಯನ್ನು ಹೋಲಿಸಿದ್ದಾನೆ.

**ಪ್ರಶ್ನೆ : ೩** ಬನವಸೆಯ ಉದ್ಯಾನಗಳು ಹೇಗೆ ನಾನಾ ವಿಧವಾಗಿ ಶೋಭಿಸುವುವು ?

**ಉತ್ತರ :** ಯಾವುದೇ ಕಾಲವಿರಲಿ, ಯಾವುದೇ ಋತು ಇರಲಿ, ಅಲ್ಲಿ ಹಲಸು, ಮಾವು, ನೇರಿಲು, ತೆಂಗು, ದಾಳಿಂಬ, ಕಿತ್ತಳೆಗಳು ಹಣ್ಣು ಬಿಡುವುವು. ಗಿಳಿ, ಕೋಗಿಲೆ ಭೃಂಗಗಳು ಹಾರಾಡುವುವು. ಇವುಗಳಿಂದಾಗಿ ಬನವಸೆಯ ಉದ್ಯಾನಗಳು ಶೋಭಿಸುವುವು.

**ಪ್ರಶ್ನೆ : ೪** ಬನವಸೆ ಯಾವ ಕಳಕಳತೆಯಿಂದ ಕೂಡಿತು ?

**ಉತ್ತರ :** ವೇದಶಾಸ್ತ್ರ ಆಗಮ ಪುರಾಣಗಳನ್ನು ಓದುವ ಸಪ್ಪಳ. ಈ ಸಪ್ಪಳು ಹೇಗಿದ್ದಿತೆಂದರೆ ಖಳನೊಡನೆ ಕಾದಿಗೆಲಿದ ಅತಿ ಬಲರನ್ನು ಬೆನ್ನು ಕಟ್ಟುವ ಧನಿಯಲ್ಲಿ ಬೀದಿ ಬೀದಿಗಳಲ್ಲಿ ಮದಗಜದ ಆನೆಯ ಗುಡುಗಿನಂತೆ ಕೇಳಿಸುವ ಹಾಗೆ ಕಳಕಳತೆಯಿಂದ ಕೂಡಿತ್ತು.

**ಪ್ರಶ್ನೆ : ೫** ಅಲ್ಲಿಯ ಜನರ ಯಾವ ಸದ್ಗುಣಗಳನ್ನು ಕವಿಯು ಎತ್ತಿ ತೋರಿಸುವನು ?

**ಉತ್ತರ :** ಬನವಸೆಯ ಜನರು ನುಡಿವುದರಲ್ಲ ಜಾಣರು, ನುಡಿದಂತೆ ನಡೆವುದರಲ್ಲಿ ಜಾಣರು, ಬೇಡಿದವರಿಗೆ ಕೊಡುವುದರಲ್ಲಿ ಜಾಣರು. ಎಂದು ಅಲ್ಲಿಯ ಜನರ ಸದ್ಗುಣಗಳನ್ನು ಕವಿಯು ಎತ್ತಿ ತೋರಿಸಿರುವನು.

**ಅಭ್ಯಾಸ :** ೧ ಸಾರಿಸುವುದು ನಂತರ ಕಾರಣಿ ತೆಗೆವುದು; ತಳಿ ಹಾಕುವುದು. ಇವು ಇಂದಿಗೂ ನಡೆದು ಬಂದಿವೆ.



## ೯ ಶ್ರವಣ ಕುಮಾರ

**ಈ ಕವಿತೆಯ ವಿಷಯವು ಯಾವುದು ?**

ಧಶರಥನು ಬೇಟೆಗಾಗಿ ಅಡವಿಗೆ ಹೋಗಿರುವನು. ಅವನಿಗೆ ಗುಳುಗುಳು ಎಂಬ ಸಪ್ಪಳ ಕೇಳುವುದು, ಅದು ಮೃಗವು ನೀರು ಕುಡಿವ ಸಪ್ಪಳವೆಂದು ಶಬ್ದ ಬಂದ ಕಡೆಗೆ ಬಾಣ ಹೊಡೆವನು. ಋಷಿ ಕುಮಾರನಾದ ಶ್ರವಣನಿಗೆ ಬಡಿವುದು. ಆ ಕತೆ ಇಲ್ಲಿದೆ.

**ಈ ಪಾಠದ ಸಾರಾಂಶ**

೧. ಒಂದು ದಿನ ಅರಸನು ಅಡವಿಗೆ ತನ್ನ ಜನರೊಡನೆ ಬೇಟೆಗೆಂದು ಬಂದನು.

೨. ಸಮೀಪದ ಕೊಳದಲ್ಲಿ ಮುನಿಕುಮಾರನು ನೀರನ್ನು ತುಂಬುತ್ತಲಿರುವಾಗ ಧ್ವನಿ ಕೇಳಿಸಿತು

೩. ಅರಸನು ಅದು ಹುಲಿಯೆಂದು ತಿಳಿಯುತ್ತ ಬಿಲ್ಲಿಗೆ ಬಾಣವನ್ನು ಹೂಡಿದನು. ಅಯ್ಯೋ ದೈವವೆ !

೪. ಬಿಟ್ಟೊಡನೆ ಬಾಣವು ಹೊಟ್ಟೆಯಲ್ಲಿ ನಟ್ಟಿತು. ಆ ಕುವರನು ಚಿಟ್ಟನೆ ಚೀರಿ ಗೋಳಿಟ್ಟನು.

೫ ಬಾಣದ ಹೊಡೆತದಿಂದ ನಾನು ಹೊಡೆಯಲ್ಪಟ್ಟೆನು. ಎಲೆ ಘಾತಕಿ, ಇನ್ನು ಯಾರು ನನ್ನ ಪಿತೃಗಳಿಗೆ ಗತಿ ?

೬ ನನ್ನ ಪಿತೃಗಳು ಕುರುಡರು; ಅವರು ನೀರಡಿಸಿರುವರು. ನೀರನ್ನು ತರಲೆಂದು ಇಲ್ಲಿಗೆ ಬಂದರೆ ಈ ಗತಿಯಾಗಬೇಕೆ ನನಗೆ ?

೭ ಆ ಕುವರನ ಕೂಗು ಅರಸನ ಎದೆಯನ್ನು ಸೀಳಿತು. ಗೋಳಿನ ಕೂಗು ಬಾಳಿಗೆ ಮುಳುವು.

೮ ಅರಸನ ಎದೆಯಲ್ಲಿ ಉರಿಹುಟ್ಟಿತು. ಮನಸ್ಸಿನಲ್ಲಿ ಕುದಿದನು. ಬಲು ಕುದಿದನು.

೯ ಶೋಕದಲ್ಲಿ ಮುಳುಗೆದ್ದು ಮುನಿಸುತನು ಇದ್ದಲ್ಲಿ ಬಂದು ಅವನ ಅಡಿಯಲ್ಲಿ ಬಿದ್ದನು

೧೦ ನನ್ನ ಬುದ್ಧಿ ಹೋಯಿತು. ಪರೀಕ್ಷಿಸದೆ ಕೃತಿಯನ್ನು ಮಾಡಿದೆನು ಅಯ್ಯೋ ದೆಸೆಗೆಟ್ಟೆನು.

೧೧ ಇಲ್ಲಿಯೆ ಸಮೀಪದಲ್ಲಿದ್ದ ಸರೋವರದಿಂದ ಗುಳುಗುಳು ಶಬ್ದವು ಬಂದಿತು; ಮನವನ್ನು ಸೆಳೆದಿತು.

೧೨ ಬೇಟೆಯ ಮೃಗವು ಎಂದು ಬಗೆದೆನು. ಬಾಣವನ್ನು ತೆಗೆದು ಬಿಟ್ಟೆನು. ನಾನು ಕೇಡಿಗನು.

೧೩ ಇದು ನನ್ನ ದುರದೃಷ್ಟವು. ಇಲ್ಲಿಗೆ ಕರೆತಂದು ಎನ್ನನು ಈ ಮಾನವ ಕೊಲೆಗೆ ಗುರಿಯಾಗಿಸಿತು.

೧೪ ಬಾಣವು ನಿನ್ನ ಒಡಲೊಳಗೆ ಸಿಕ್ಕಿದ್ದರೂ ನನ್ನ ಒಡಲು ಸುಡುತ್ತದೆ ನೋಡು, ಎಲೆ ಕುವರ.

೧೫ ಮುನಿಬಾಲಕನು ಅರಸನ ಎದೆ ಉರಿಯನ್ನು ಕಂಡನು. ನೊಂದು. ಅವನು ಬಲು ಮಿಡುಕಿದನು.

೧೬ ಅವನು ಅರಸನ ಕೈಹಿಡಿದನು. ಸರಲಹೃದಯನಾದ ಮುನಿಕುವರನು ಅರಸನಿಗೆ ಮರುಗದಿರು ಎಂದನು.

೧೭ ತಿಳಿಯದೆ ನೀನು ಬಿಲ್ಲಿಗೆ ಬಾಣವನ್ನು ಹೂಡಿದೆ. ಅರಸನೇ ಇದರಲ್ಲಿ ತಪ್ಪೇನಿದೆ ?

೧೮ ನನ್ನ ಪಿತೃಗಳು ಅತಿ ಮುದುಕರು. ಎಲೆ ಅರಸನೇ, ಅವರಿಗೆ ಇನ್ನು ನೀನೆಗತಿ.

೧೯ ಹೆದರಬೇಡ ಇನ್ನು ನಿನ್ನನ್ನು ನೀನು ನನ್ನ ತಂದೆ ತಾಯಿಗಳ ಎದುರಿನಲ್ಲಿ ಒಯ್ದಿಡು.

೨೦ ಅವರು ಬಲು ನೀರಡಿಸಿ ಹಲುಬುತಲಿರುವರು ಬೇಗನೇ ನೀರಿನ ಪಾತ್ರೆಯನ್ನು ತೆಗೆದುಕೊಂಡು ಹೋಗು.

೨೧ ಕಡಲೆ ಅರಸನು ಕೊಡವನು ತುಂಬಿದನು. ಹುಡುಗನೊಡನೆ ಮುನಿ ಇದ್ದಲ್ಲಿ ನಡೆದನು.

೨೨ ಅರಸನು ಮುನಿಸುತನನ್ನು ಎತ್ತಿಕೊಂಡು ಬಂದು ಮುನಿ ಇರುವ ಸ್ಥಳದಲ್ಲಿ ಇಳಿಸಿದನು.

**ಕಠಿಣ ಶಬ್ದಗಳ ಅರ್ಥ**

ಐತರು—ಬಾ. ವಿಪಿನ—ಅರಣ್ಯ. ಕೊಳ—ಸರೋವರ. ಶರ—ಬಾಣ. ನೃಪಾಳಕ—ಅರಸ. ಮುಳುವು—ಮುಳ್ಳು. ಮಸಳಿಸು—ಮಸುಕಾಗು. ಪರಕಿಸದ—ಪರೀಕ್ಷಿಸದ. ಅಂಬು—ಬಾಣ. ಎಚ್ಚೆ—ಎಸೆ ಕೇಡಿಗ—ಕೆಟ್ಟನ್ನು ಮಾಡಿದವ. ದುರದೃಷ್ಟ—ದುರ್ದೈವ. ಸರಳು—ಬಾಣ.

**ಕಠಿಣ ವಾಕ್ಯಗಳ ಅರ್ಥ**

೧ ಬಾಳಿಗೆ ಮುಳುವೆಲೆ ಗೋಳಿನ ಕೂಗು.

ಯಾರನ್ನಾದರೂ ಗೋಳಿಡಿಸಿದರೆ ಅವರ ದನಿಯಿಂದ ಬರುವುದು ಶಾಪದಂತೆ. ನೊಂದ ಹೃದಯದ ಮಾತು ಸತ್ಯವಾಗುವುದು. ಯಾರು ನೋಯಿಸಿರುವರೋ ಅವರ ಬಾಳಿಗೆ ಅದು ಮುಳುವು. ಆದಕ್ಕೆ ಯಾರೂ ಯಾರ ಮನಸನ್ನು ನೋಯಿಸಿ ಅವರನ್ನು ಗೋಳಿಗೆ ಈಡುಮಾಡಬಾರದು.

**ಪ್ರಶ್ನೆ—ಉತ್ತರ**

**ಪ್ರಶ್ನೆ :** ೧ ಶ್ರವಣಕುಮಾರನು ಕೊಳಕ್ಕೆ ಏತಕ್ಕಾಗಿ ಹೋಗಿದ್ದನು :

**ಉತ್ತರ :** ತನ್ನ ತಂದೆತಾಯಿಗಳಿಗೆ ಕೊಡಲು ಕುಡಿಯುವ ನೀರು ತರಲು ಶ್ರವಣಕುಮಾರನು ಕೊಳಕ್ಕೆ ಹೋಗಿದ್ದನು.

**ಪ್ರಶ್ನೆ : ೨** ತಾನು ಕೇಳಿದ ದನಿಯು ಏತರದೆಂದು ದಶರಥನು ತಿಳಿದನು ?

**ಉತ್ತರ :** ತಾನು ಕೇಳಿದ ಸಪ್ಪಳವು ಬೇಟೆಯ ಮೃಗದ ಸಪ್ಪಳವೆಂದು ದಶರಥನು ತಿಳಿದನು.

**ಪ್ರಶ್ನೆ : ೩** ಆತನ ಎದೆಯನ್ನು ಸೀಳಿವ ಕೂಗು ಯಾವುದು ?

ಉತ್ತರ : ಅಯ್ಯೋ ಬಾಣಕ್ಕೆ ತುತ್ತಾದೆನು ನಾನು. ಇನ್ನು ನನ್ನ ತಂದೆ ತಾಯಿಗೆ ಯಾರು ಗತಿ. ಅವರು ಕುರುಡರು; ನೀರಡಿಸಿದವರು. ನೀರನು ತರಲಿಕ್ಕೆ ಇಲ್ಲಿಗೆ ಬಂದರೆ ನನ್ನ ಗತಿ ಹೀಗಾಗಬೇಕೇ ಎಂದು ಕುವರನು ಕಳವಳಪಟ್ಟು ಆಡಿದ ಮಾತು ದಶರಥನ ಎದೆಯನ್ನು ಸೀಳಿತು.

**ಪ್ರಶ್ನೆ : ೪** ನಿಜವಾದ ಸಂಗತಿಯನ್ನು ತಿಳಿದ ಬಳಿಕ ದಶರಥನು ಹೇಗೆ ಮಿಡುಕಿದನು.

**ಉತ್ತರ :** ಅಯ್ಯೋ ನನ್ನ ದುರ್ದೈವ; ಅದು ನನ್ನನ್ನು ಇಲ್ಲಿಗೆ ಕರೆ ತಂದು ಮಾನವ ಘಾತಕ್ಕೆ ಗುರಿ ಮಾಡಿತಲ್ಲ. ಬಾಣವು ಕುಮಾರ ಒಡಲೊಳಗೆ ಸಿಕ್ಕಿದ್ದರೂ ದಶರಥನ ಒಡಲು ಉರಿಯುತ್ತಿದೆ. ಎಂದು ಮಿಡುಕಿದನು.

**ಪ್ರಶ್ನೆ : ೫** ಶ್ರವಣ ಕುಮಾರನು ದಶರಥನನ್ನು ಹೇಗೆ ಸಂತೈಸಿದನು ?

ಉತ್ತರ : ಎಲೆ ಅರಸನೆ, ಅರಿಯದೆ ನೀನು ಬಾಣನ್ನು ಹೊಡಿದೆ. ಇದರಲ್ಲಿ ತಪ್ಪೇನು ? ಆದರೆ, ನನ್ನ ತಂದೆ ತಾಯಿ ಅತಿ ಮುದುಕರು ಇನ್ನು ನೀನೇ ಅವರಿಗೆ ಗತಿ ಎಂದು ಹೇಳಿ ಸಂತೈಸಿದನು.

**ಅಭ್ಯಾಸ :** ೧ ನೀವೇ ಮಾಡಿರಿ.

೨ ಬುಳು ಬುಳು ಮಣ್ಣು ಉದುರುವುದು. ಸಳ ಸಳ ಹರಿಯಿತು. ಕಳ ಕಳವಾಯಿತು ಸಪ್ಪಳ.

೩. ಈ ಪಾಠದಲ್ಲಿ ಅರಸು ಎಂಬ ಶಬ್ದಕ್ಕೆ ಬಂದ ಇತರ ಶಬ್ದಗಳನ್ನು ನೋಡಿರಿ. ನೃಪ; ನರಪತಿ, ನೃಪಾಳಕ, ಜನಪತಿ, ನೃಪತಿ, ಧರಣೀಪತಿ, ಭೂಪತಿ ಜನಪ, ಅವನೀಶ. ಬಾಣ ಶಬ್ದಕ್ಕೆ ಬಂದವು : ಬಾಣ ಸರಳು, ಶರ, ಅಂಬು

**ನೆನಪಿಗಾಗಿ :** ಬಾಳಿಗೆ ಮುಳುವೆಲೆ ಗೋಳಿನ ಕೂಗು



## ೧೦ ಯಾಕೆ ಯಾತ್ರೆಯ ಮಾಡುತಿರ್ಪರು ?

**ಈ ಕವಿತೆಯ ವಿಷಯವು ಯಾವುದು ?**

ಒಳ್ಳೆಯ ಗುಣಗಳಿದ್ದರೆ ಯಾತ್ರೆಯನ್ನು ಮಾಡುವುದು ಅವವಶ್ಯಕ. ಕೆಟ್ಟ ಗುಣಗಳನ್ನು ಬಿಡದೆ ಯಾತ್ರೆ ಮಾಡಿದರೆ ನಿರರ್ಥಕ. ಆದ್ದರಿಂದ ಯಾಕೆ ಯಾತ್ರೆಯ ಮಾಡುವರು ಜನ, ಎಂದು ಕೇಳಿದೆ.

**ಈ ಪಾಠದ ಸಾರಾಂಶ**

ಪಲ್ಲ : ಯಾಕೆ ಯಾತ್ರೆಯ ಮಾಡುತಿರುವರು ? ಅಲ್ಲೇನಿರುವುದು ? ಯಾತ್ರೆ ಮಾಡುವುದು ಸಾಕು. ತಮ್ಮಲ್ಲಿ ಈ ಗುಣಗಳಿರುತ್ತಿರಲು ಯಾತ್ರೆ ಸಾಕು.

೧. ಪರನಿಂದೆ, ಪರವಧೂಸಾಂಗ, ಕಪಟ, ಕುಯುಕ್ತಿ, ಪರಹಿಂಸೆ, ನಿರ್ದಯತೆ ಕಠೋರ ಮಾತು, ಗುರುಗಳಿಗೆ ಅವಿಧೇಯರಾಗುವುದು. ಮದಮೋಹ, ರಾಗ ದ್ವೇಷ ಮುಂತಾದ ದುರ್ಗುಣಗಳಿರಲು ಯಾಕೆ ಯಾತ್ರೆಯ ಮಾಡಬೇಕು. ಅದರಿಂದ ಫಲವಿಲ್ಲ.

೨. ಸತ್ಯ, ಸನ್ಮಾರ್ಗ, ಶಮನ, ದಮನ, ಶಾಂತಿ ಗುರುಭಕ್ತಿ. ತತ್ವವಿವರಣೆ ವಿದ್ಯಾ, ವಿನಯ, ದಯಾ, ಧರ್ಮ, ನಿತ್ಯಕರ್ಮ, ವಿವೇಕ, ವಿರಕ್ತಿ, ಜಪತಪ ಯೋಗ ಇತ್ಯಾದಿ ಸದ್ಗುಣಗಳು ತಮ್ಮಲ್ಲಿ ಇರುವಾಗ ಯಾತ್ರೆಯ ಮಾಡುವ ಕಾರಣವೇನು ?

೩ ಈ ಗುಣಗಳನ್ನು ತಿಳಿದರೆ ಒಂದೊಂದು ನೂರು ಯಾತ್ರೆಮಾಡಿದ ಪುಣ್ಯವನ್ನು ನಾಶಮಾಡುವುದು. (೧ನೆಯ ಪದ್ಯದಲ್ಲಿಯ ಗುಣವಿದ್ದರೆ); ಪುಣ್ಯವನ್ನು ಕೊಡುವುದು (೨ನೆಯ ಪದ್ಯದ ಗುಣಗಳಿದ್ದರೆ). ಮೊದಲನೆಯ ಪದ್ಯದ ಗುಣಗಳು ಆದಿಗುಣಗಳು. ಎರಡನೆಯವು ಅಂತ್ಯಗುಣಗಳು. ಅಂತ್ಯ ಗುಣ ಹಿಡಿದರೆ ಗುರುಸಿದ್ಧನು ಒಲಿವನೆಂಬುದನ್ನು ಮರೆಯದಿರು.

**ಕಠಿಣ ಶಬ್ದಗಳ ಅರ್ಥ**

ಪರನಿಂದೆ—ಇನ್ನೊಬ್ಬರ ನಿಂದೆ. ಪರವಧೂ—ಪರಸತಿ. ಕುಯುಕ್ತಿ—ಕೆಟ್ಟಯುಕ್ತಿ. ಗುರುನಿರಾಕರಣೆ—ಗುರುಗಳಿಗೆ ಅವಿಧೇಯರಾಗಿರುವುದು. ತತ್ವವಿವರಣೆ—ಧರ್ಮ ತತ್ವ ವಿವೇಚನೆ. ವಿರತಿ—ವಿರಕ್ತಿ. ಶತಯಾತ್ರೆ—ನೂರುಯಾತ್ರೆ. ತವಿಸು—ನಾಶಮಾಡು.

**ಪ್ರಶ್ನೆ-ಉತ್ತರ**

**ಪ್ರಶ್ನೆ : ೧** ತಮ್ಮೊಳಗೆ ಗುಣಗಳಿರುತಿರಲು ಎಂದು ಪಲ್ಲವಿಯಲ್ಲಿ ಹೇಳಿದೆ. ಇವುಗಳಲ್ಲಿ ದುರ್ಗುಣಗಳ ಗುಂಪು ಯಾವುದು; ಸದ್ಗುಣಗಳ ಗುಂಪು ಯಾವುದು ?

**ಉತ್ತರ :** ಮೊದಲನೆಯ ಪದ್ಯದಲ್ಲಿ ಬಂದುದು ದದುರ್ಗುಣಗಳ ಗುಂಪು. ಎರಡನೆಯ ಪದ್ಯದಲ್ಲಿರುವುದು ಸದ್ಗುಣಗಳ ಗುಂಪು. ಸಾರಾಂಶ ನೋಡಿರಿ.

**ಪ್ರಶ್ನೆ : ೨** ಯಾರ ಯಾತ್ರೆ ನಿರರ್ಥಕವಾಗುವುದು ?

**ಉತ್ತರ :** ಮೊದಲನೆಯ ಪದ್ಯದಲ್ಲಿರುವಂತಹ ಆದಿಗುಣಗಳು ಇರುವಂತಹರ ಯಾತ್ರೆ ನಿರರ್ಥಕವಾಗುವುದು.

**ಪ್ರಶ್ನೆ: ೩** ಯಾತ್ರೆಯ ಆವಶ್ಯಕತೆ ಯಾರಿಗೆ ಇಲ್ಲ ?

**ಉತ್ತರ :** ಸದ್ಗುಣಗಳು ಯಾರಿಗೆ ಇವೆ ಅವರಿಗೆ ಯಾತ್ರೆಯು ಆವಶ್ಯಕವಿಲ್ಲ.

**ಪ್ರಶ್ನೆ : ೪** ಏನು ಮಾಡಿದರೆ ಗುರುಸಿದ್ಧನು ಒಲಿವನೆಂದು ಶ್ರೀ ಶಿವಯೋಗಿಗಳು ಹೇಳಿದರು ?

**ಉತ್ತರ :** ಆದಿಗುಣಗಳನ್ನು ಬಿಟ್ಟು ಅಂತ್ಯಗುಣಗಳನ್ನು ಹಿಡಿದು ಬದುಕುವವನಿಗೆ ಗುರುಸಿದ್ಧನು ಒಲಿವನು.



## ೧೧ ಏಳಿ

**ಈ ಕವಿತೆಯ ವಿಷಯ ಯಾವುದು ?**

ಯಾವುದೂ ಕೈಮೀರಿ ಇಲ್ಲ. ಸುಮ್ಮನೆ ಅತ್ತರೆ ಫಲವಿಲ್ಲ. ಮುಂದಾಗಿ ನುಗ್ಗಿ ದುಡಿದರೆ ಬೇಡಿದ ಫಲ, ಜಯ, ಶ್ರೇಯಸ್ಸು. ಎಂದು ಹುರುಪು ಕೊಡುವ ಕವಿತೆಯಿದು.

**ಈ ಪಾಠದ ಸಾರಾಂಶ**

೧. ಅತ್ತರೇನು ಫಲ; ಏಳಿರೇಳಿರಿ ಗೆಳೆಯರೆ, ಸಾಧನಮಾಡು ಜನತೆಗೆ ಜಯವು ಮಂಗಳವು. ಹೋದುದು ಹೋಗಲಿ, ಏಳಿರಿ, ಅದಕ್ಕೇಕೆ ಚಿಂತೆ ಆದುದು ಆಗಲಿ, ಏಳಿ, ಹೆದರಿಕೆಯೇಕೆ ?

೨. ನಾವು ಮಾಡದಿದ್ದರೆ ಇನ್ನು ಯಾರು ಕಾರ್ಯ ಮಾಡವುರು ? ಮುಂದೆ ನಾವು ನುಗ್ಗದಿದ್ದರೆ ಬೇರೆ ಯಾರು ಬರುವರು? ನಾವು ನಮ್ಮ ದೇಶದ ಕೀರ್ತಿ ಮಂದಿರಕ್ಕೆ ತಳಪಾಯ. ನಾವು ನಮ್ಮ ದೇಶದ ನಾಳಿನ ಮಾನ ಕಾಯುವ ಯೋಧರು.

೩. ದೇವರು ಹುಟ್ಟಿಸಿದ್ದಾನೆ. ಅವನು ಪೊರೆಯುವನು. ಯಾವನು ಕಷ್ಟಗಳನ್ನು ಉಂಟುಮಾಡಿರುವುದೋ ಅವನೇ ಪರಿಹಾರ ಮಾಡುವನು. ಇದೆಲ್ಲ ಹಣೆಯ ಬರಹ. ಎಂದು ನಿಸ್ಸತ್ವರು ಆಡುವ ಮಾತು ದೂಡಿಬಿಡಿರಿ, ಏಳಿರಿ.

೪. ಅಜ್ಞಾನದ ಅಂಧಕಾರವನ್ನು ಹೋಗಲಾಡಿಸಿರಿ, ಏಳಿರಿ. ಜ್ಞಾನದೀಪಗಳನ್ನು ಬೆಳಗಿರಿ, ಏಳಿರಿ. ಸಜ್ಜನರ ಮತ್ತು ದುರ್ಬಲರ ಪಕ್ಷಗಟ್ಟಿ ದುರ್ಜನನ ಸೊಕ್ಕನ್ನು ಮುರಿಯಿರಿ, ಏಳಿರಿ.

೫. ನಮ್ಮ ಹಿರಿಯರ ಧರ್ಮ, ನಮ್ಮ ಕಾಲಧರ್ಮ ನಮ್ಮ ಭಾರತಭೂಮಿ ಚಮತ್ಕಾರವುಳ್ಳದ್ದು. ನಮ್ಮ ಸಂಕಲ್ಪಗಳನ್ನು ಸಂಪೂರ್ಣ ಗುರಿಗಳ ಬಗ್ಗೆ ಒಂದೆ ಮನದಿಂದ ಮಾಡಿದ ಯತ್ನಗಳನ್ನು ತಿಳಿಸಿ ಹೇಳಿರಿ, ಏಳಿರಿ.

೬. ಹಂದಿಯ ಹೇಡಿತನ, ಆಲಸ್ಯಗಳು ಇವುಗಳಿಂದ ಬಿಡುಗಡೆ ಹೊಂದಿರಿ. ಹಿಂದಿನ ಅಪಮಾನಗಳನ್ನು ತೊಳಿಯಿರಿ, ಏಳಿರಿ. ಇಂದು ನಿರ್ಭಯದಿಂದ ಕಣದಲ್ಲಿ ಕಾದಿದರೆ ಹಿಂದಿನ ಅಪಮಾನಗಳು ತೊಳೆದು ಹೋಗುವುವು, ಏಳಿರಿ.

**ಕಠಿಣ ಶಬ್ದಗಳ ಅರ್ಥ**

ರೋದಿಸು—ಅಳು. ಗೈಯು—ಮಾಡು. ತಳಪಾಯ—ಅಸ್ತಿವಾರ; ಬುನಾದಿ. ಭಟ—ಯೋಧ. ನಷ್ಟಸತ್ವರು—ಸತ್ವ ಕಳೆದುಕೊಂಡವರು. ತಿಮಿರ—ಕತ್ತಲೆ: ಅಂಧಕಾರ. ದುರ್ಮದ—ಸೊಕ್ಕು. ಒಮ್ಮನ—ಒಂದೇಮನ. ಪಂದೆತನ—ಹೇಡಿತನ.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ರೋದಿಸಿದರೇನು ಫಲ ಎಂದು ಕವಿಯು ಯಾರನ್ನು ಕುರಿತು ಹೇಳಿರುವನು ?

**ಉತ್ತರ :** ಇಂದಿನ ತರುಣರನ್ನು ಕುರಿತು ಕವಿಯು ಈ ಮಾತು ಹೇಳಿದ್ದಾನೆ.

**ಪ್ರಶ್ನೆ : ೩** ನಷ್ಟಸತ್ವರು ಯಾರು ?

**ಉತ್ತರ:** ದೈವದ ನಿಜರೂಪದ ತಿಳಿಯದೆ ಮುಗ್ಗಲುಗೇಡಿಯಾಗಿ ದೈವದ ಮೇಲೆ ಭಾರಹಾಕಿ, ಹುಟ್ಟಿಸಿದವ ಹುಲ್ಲು ಮೇಯಿಸುವನೆ, ಎಂಬ ತತ್ವವನ್ನು ಹೇಳುವವರು ನಷ್ಟಸತ್ವರು.

**ಪ್ರಶ್ನೆ : ೨** ಏಳಿರೆಂದು ಎಚ್ಚರಿಸಿ ಮುಂದೆ ಯಾವ ಕಾರ್ಯವನ್ನು ಮಾಡಲು ಕವಿಯು ಹೇಳಿರುವನು ?

**ಉತ್ತರ :** ಅಜ್ಞಾನವೆಂಬ ಅಂಧಕಾರವನ್ನು ಹೋಗಲಾಡಿಸಿರಿ, ಸುಜ್ಞಾನ ದೀಪವನ್ನು ಬೆಳಗಿರಿ. ಸಜ್ಜನರು ದುರ್ಬಲರು ಇವರ ಪಕ್ಷಗಟ್ಟಿರಿ. ದುರ್ಜನರ ಸೊಕ್ಕನ್ನು ಮುರಿಯಿರಿ. ನಮ್ಮ ಧರ್ಮ, ಭಾರತದ ಮಹಿಮೆ, ನಮ್ಮ ನಮ್ಮ ಸಂಕಲ್ಪ, ನಮ್ಮ ಗುರಿ, ನಮ್ಮ ಯತ್ನಗಳು ಇವುಗಳನ್ನು ತಿಳುಹಿರಿ. ಕಣದಲ್ಲಿ ಇಳಿದು ಕಾದಿ ಹಿಂದಿಆದ ಅಪಮಾನವನ್ನು ತೊಳೆಯಿರಿ, ಎಂದು ಕವಿಯು ಹೇಳುವನು.

**ಅಭ್ಯಾಸ :** ೨ ಸಿಂಹ ಶೌರ್ಯಕ್ಕೆ. ನರಿಯು ಜಾಣತನಕ್ಕೆ ಪ್ರಸಿದ್ಧವಿರುವುವು.



# ೧೨ ಹಳ್ಳಿಯ ಚಿತ್ರ

**ಈ ಕವಿತೆಯ ವಿಷಯವು ಯಾವುದು ?**

ಹಳ್ಳಿಯ ಜೀವನದಲ್ಲಿ ಏನೇನು ಕಾಂಬುದು ? ಊರಬಿಟ್ಟುಹೋಗಿ ಊರನ್ನು ನೆನೆವಾಗ ಯಾವ ಭಾವ ಮೂಡುವುದು ? ಬಾಲ್ಯದ ನೆನಹು ಬಂದಾಗ ದುಃಖವಾದ ರೀತಿ ಇವು ಇಲ್ಲಿ ಬಂದಿವೆ.

**ಈ ಪಾಠದ ಸಾರಾಂಶ**

೧ ನಮ್ಮೂರ ಹತ್ತಿರ ಗುಡ್ಡವಿದೆ. ಆ ಗುಡ್ಡದ ಓರೆಯ ಸಮೀಪದಲ್ಲಿ ಸಣ್ಣ ಹಳ್ಳವಿದೆ. ಅಲ್ಲಿ ಒಂದು ವಿಶಾಲ ಆಲದ ಮರವಿದೆ. ಎಲೆಬಳ್ಳಿತೋಟವಿದೆ. ಈಶ್ವರನ ಗುಡಿಯಿದೆ ಒಂದು ಕಲ್ಲುಕಟ್ಟೆಯಿದೆ. ಊರಲ್ಲಿ ಮಾದರಕೇರಿ ಕೆಮ್ಮರಡಿ, ಒಂದೇ ಎರಡೇ; ಇವೆಲ್ಲವೂ ಎಂತಹ ನೋಟವನ್ನು ಒದಗಿಸುವುದು.

೨ ಜೋಳದಹೊಲದಲ್ಲಿ ಹೊಡೆಹಾಯಿದು ಬಂಗಾರದ ತಲೆ ತೂಗುತ್ತಿದ್ದವು. ಅಕ್ಕಡಿಕಾಳುಗಳ ಬಳ್ಳಿಗಳು ತುಂಬ ಬೆಳೆದಿರುತ್ತಿದ್ದುವು. ಬನ್ನಿಗಿಡದ ತಳದಲ್ಲಿ ಕೂತು ಬುತ್ತಿತಿಂದು ತತ್ರಾಣಿಯೊಳಗಿನ ನೀರು ಕುಡಿಯುವುದೆಂದರೆ ಬಲು ಸೊಂಪು.

೩ ಸವಾರಿ ಚಕ್ಕಡಿಗೆ ಹೂಡಿರುವ ಎತ್ತುಗಳ ಕೊರಳಗೆಜ್ಜೆಗಳನಾದವು ಮನಸ್ಸಿಗೆ ಆನಂದವನ್ನುಂಟುಮಾಡುತ್ತಿದ್ದುವು. ಗಾಡಿ ಹೊಡೆಯುವ ಆಳು ಲಾವಣಿ ಹೇಳತೊಡಗಿದನೆಂದರೆ, ಆಕಾಶ ಮತ್ತು ಬಯಲು ತುಂಬಿ ಹೋಗುತ್ತಿತ್ತು. ಎಂತಹ ನಾದವದು.

೪ ಕಮ್ಮಾರ ಮಾನಪ್ಪನು ತನ್ನ ಕುಲುಮೆಗೆ ತಿದಿಯೊತ್ತಿ ಕೆಂಪುಮಾಡಿ ಕಬ್ಬಿಣವನ್ನು ಕೆಂಗೆಂಡದಂತೆ ಮಾಡಿ ಅದನ್ನು ಅಡಿಗಲ್ಲ ಮೇಲೆ ಇರಿಸಿ ದೊಡ್ಡ ಸುತ್ತಿಗೆಯನ್ನು ತೆಗೆದುಕೊಂಡ ಪೆಟ್ಟು ಹಾಕುತ್ತಲಿರುವಾದ ಕಿಡಿಗಳು ಸುತ್ತೆಲ್ಲ ಹಾರುವುವು.

೫ ಕುಂಬಾರ ಮಲ್ಲಣ್ಣನ ಮನೆಗೆ ಬಂದು ಅವನ ಕೆಲಸ ನೋಡುವುದು ಮನಸ್ಸಿಗೆ ಒಂದು ಆನಂದ. ಅವನು ಅರಲು ತುಳಿದು ಮಿದ್ದಿ ತಿಗರಿಯ ಮೇಲೆ ಹಾಕಿ ಗಡಿಗೆ ಮಾಡುವನು. ಏನು ಅವನ ಕೈಚಳಕ ! ನಮ್ಮೂರಿಗೆ ಅವನದು ಹಂಚಿನಮನೆ ಉಳಿದುವು ಮಾಳಿಗೆ ಮನೆಗಳು.

೬ ಕೆರವು ಹೊಲಿಯುವ ಮಾದರ ದುರುಗನು ಹತ್ತಿರ ಬಂದವರಿಗೆ ಮುಟ್ಟಬೇಡಿರಿ ತಂದೆ, ಎಂದು ನುಡಿಯುವನು. ಅವನ ನುಡಿಯು ನನ್ನೆದೆಯಲ್ಲಿ ಕಸವಿಸಿಯುಂಟುಮಾಡವುದು. ಬಾಲಕರಿಗೆ ಎಲ್ಲಿಯ ಮಡಿ ಮೈಲಿಗೆ.

೭ ದನವ ಕಾಯುವ ನಿಂಗ ಎಮ್ಮೆಯನ್ನು ಹತ್ತಿಕೊಂಡು ಕೊಳಲನ್ನು ಊದುತ್ತ ಮನೆಗೆ ಬರುವ. ಮನೆಗೆ ಬರುವಾಗ ಅವನ ಕಿಸೆಯ ತುಂಬ ಅಡವಿಯಲ್ಲಿ ಬೆಳೆದ ಕಾರಿಬೋರೆಹಣ್ಣು, ಚಪ್ಪರಬದನೆ, ಇಪ್ಪೆ. ಮಾವಿನಕಾಯಿಗಳು ಕಂಡು ಬರುವುವು.

೮ ಕೆಲಸಿಗರವನಾದ ಕೆಂಚನನ್ನು ಕಂಡರೆ ಇಂದಿಗೂ ಭಯವು ಬರುವುದು. ಅವನ ಹತ್ತಿರ ಇರುವುದು ಒಡೆದ ಕನ್ನಡಿ, ಮುರಿದ ಮೊಂಡಕತ್ತಿ. ಅವನ ಕೈಯಿಂದ ತಲೆ ಒಮ್ಮೆ ಪಾರಾಯಿತೆಂದರೆ ಮರುಜನ್ಮ ಪಡೆದಂತೆ. ಅಷ್ಟು ಉರಿವುದು ನೆತ್ತಿ.

೯ ನಾನು ಹುಟ್ಟಿದ ಹಳ್ಳಿಯನ್ನು ಬಿಟ್ಟು ಬೇರೆ ಊರಲ್ಲಿ ನೆಲಸುವ ಸಮಯ ಬಂದುದರಿಂದ ಮನಸೋತುಹೋದೆ. ನನ್ನ ಹಳ್ಳಿಯ ಗೆಳೆಯರ ನೋಟ, ಅವರೊಡನೆ ಆಡಿದ ಆಟ ಇವುಗಳನ್ನು ನೆದೆದು ಕಂಣೀರು ಹಾಕಿ ಖಿನ್ನನಾದೆ.

**ಕಠಿಣ ಶಬ್ದಗಳ ಅರ್ಥ**

ಮಾದರಕೇರಿ—ಮಾದರು ಇರುವ ಕೇರಿ. ಕೆಮ್ಮರಡಿ—ಕೆಂಪು ಮರಡಿ. ಹೊಂದಲೆ—ಹೊನ್ನ + ತಲೆ : ಹೊಂದಲೆ. ಸೊಂಪು—ಸೊಗಸು. ಮಿದ್ದು—ಮಣ್ಣನ್ನು ಹದಗೊಳಿಸಿ. ಮಹಿಷ—ಎಮ್ಮೆ-ಕೋಣ. ಕೆಂಗುಲಿಮೆ—ಕೆಂಪು ಕುಲಿಮೆ ಕೆಂಗಂಡ—ಕೆಂಪು ಕೆಂಡ. ಕೆಲಸಿಗ—ಹಜಾಮು.

**ಪ್ರಶ್ನೆ—ಉತ್ತರ**

**ಪ್ರಶ್ನೆ : ೧** ಈ ಕವನದಲ್ಲಿ ಯಾವ ಯಾವ ವ್ಯಕ್ತಿಗಳ ಶಬ್ದ ಚಿತ್ರಗಳನ್ನು ಕವಿಯು ಕೊಟ್ಟಿದ್ದಾನೆ ?

ಉತ್ತರ : ಕುಮ್ಮಾರ, ಕುಂಬಾರ, ಚಮ್ಮಾರ; ದನಗಾಹಿ ಕೆಲಸಿಗ, ಇವರ ಶಬ್ದ ಚಿತ್ರಗಳನ್ನು ಕವಿಯು ಈ ಕವನದಲ್ಲಿ ಕೊಟ್ಟಿದ್ದಾನೆ.

**ಪ್ರಶ್ನೆ : ೨** ಬಾಲಕರಿಗಲ್ಲಿಯದು ಮಡಿ ಮೈಲಿಗೆ ಪಂಕ್ತಿಯಲ್ಲಿ ಹೊಸ ಕಾಲದ ಯಾವ ವಿಚಾರವನ್ನು ಕವಿಯು ಸೂಚಿಸಿರುವನು ?

**ಉತ್ತರ :** ಬಾಲಕರು ಶುದ್ಧ ಮನಸ್ಸಿನವರು. ಅವರಿಗೆ ಸಮಾಜದ ಕಟ್ಟುಗಳ ಕಲ್ಪನೆ ಇರದು. ಅಂತ:ಕರಣವೇ ಅವರ ಮಾರ್ಗದರ್ಶಕ. ಕುತೂಹಲವೇ ಅವರ ದಾರಿ ದೀಪ ಹೀಗಾಗಿ ಎಲ್ಲಿ ಹೋಗಬೇಕೆನ್ನಿಸುವುದೋ, ಏನು ನೋಡಬೇಕು ಎನ್ನಿಸುವುದೋ ಅಲ್ಲಿಗೆ ಅವರು ಹೋಗುತ್ತಾರು. ಅವರಿಗೆ ಇವನು ಮಾದರವ ಇವನ ಕೆಲಸಿಗ ಇವುಗಳ ಭೇದವಿಲ್ಲ. ಈ ಮಾತಿನಲ್ಲಿ ಹೊಸ ಕಾಲದ ವಿಚಾರವು ಮೂಡಿದೆ. ಹರಿಜನರನ್ನು ಮುಟ್ಟಿಸಿ ಕೊಳ್ಳಬಾರದೆಂಬುದು ಹಳೆಯ ರೀತಿ. ಈಗ ಆ ಭಾವ ಹೋಗಿದೆ. ಮಾನವರೆಲ್ಲರೂ ಒಂದೇ ಎಂಬ ಭಾವ ಮೂಡಿದೆ.

**ಪ್ರಶ್ನೆ : ೩** ತಿಳಿ ನಗೆಯನ್ನು ಸೂಚಿಸುವ ಪಂಕ್ತಿ ಯಾವುದು ?

ಉತ್ತರ : ಅವನ ಕೆಟ್ಟ ಕತ್ತಿಯಿಂದ ತಲೆಯೊಮ್ಮೆ ಪಾರಾಗೆ ಮರುಜನ್ಮ ಪಡೆದಂತೆ ಉರಿವ ನೆತ್ತಿ.

**ಅಭ್ಯಾಸ :** ೧—೨ ನೀವೇ ಬರೆಯಿರಿ.

## ೧೩ ಮಿತ್ರಪ್ರೇಮ

**ಈ ಕವಿತೆಯ ವಿಷಯವು ಯಾವುದು ?**

ಕರ್ಣನ ಬಗ್ಗೆ ದುರ್ಯೋಧನನ ವಿಚಾರಗಳು ಏನು ಇದ್ದವು ? ಕರ್ಣನ ಸಾವನ್ನು ನೆನೆದು ದು:ಖಿಸುವಾಗ ದುರ್ಯೋಧನನ ಬಾಯಿಂದ ಬಂದ ಮಾತುಗಳಿವು.

**ಈ ಪಾಠದ ಸಾರಾಂಶ**

ವಚನ : ದಿನಕರನ ಮಗನಾದ ಕರ್ಣನನ್ನು ದುರ್ಯೋಧನನು ನೋಡಿ ಕಣ್ಣೀರು ತುಂಬಿ ಬಂದು ಗದ್ಗದಿತನಾಗಿ ಶೋಕದ ಬೆಂಕಿಯಿಂದ ಸುಟ್ಟಂತೆ ಯಾಗಿ ಅಂತ:ಕರಣವುಕ್ಕಿ ಬಂದಿತು.

೧. ನಾನು ದು:ಶಾಸನ ಮತ್ತು ನೀನು ಮುವ್ವರು ಹೊಂದಿಕೊಂಡವರು ಆಗಿದ್ದೆವು. ದು:ಶಾಸನನ ಮರಣದ ನಂತರ ನಾನು ಮತ್ತು ನೀನು ಜತೆಯಾಗಿದ್ದೆವು. ನೀನು ಮತ್ತೆ ಎಲ್ಲಿ ಹೋದೆ ಅಂಗಾಧಿಪತಿಯೆ.

೨. ನಿನ್ನ ಇಂದಿನ ರೀತಿಯನ್ನು ನಾನು ತಿಳಿಯೆನು. ನೀನು ನನ್ನ ಮೇಲೆ ಸಿಟ್ಟಿಗೆದ್ದಿರುವೆಯಾ, ಮರುಮಾತನಾಡದೆ ಮರವಿನಲ್ಲಿರುವೆಯಾ ಬಹಳ ಬಳಲಿರುವೆಯಾ ?

೩. ನಿನ್ನ ಗೆಳೆಯ ಸುಯೋಧನನು ಇಲ್ಲಿ ಬಂದಿದ್ದಾನೆ. ಅವನನ್ನು ನೋಡದೆ ಅವನೊಡನೆ ಮಾತನಾಡದೆ, ಅಪ್ಪಿಕೊಳ್ಳದೆ, ಏನು ವ್ಯಸನವೆಂದು ಕೇಳದೆ, ಜೀಯಾ ಎನ್ನದೆ, ದೇವಾ ಎನ್ನದೆ, ಏಕೆ ಮಾತನಾಡದೆ ಇರುವೆ ಅಂಗಾಧಿಪತೀ.

೪. ನೀನು ಇರುವ ನಾಡಿನಲ್ಲಿ ಸುಳ್ಳು, ಲೋಭ, ಭಯವೆಂಬುವು ಇರುವವೆ ಕರ್ಣ ? ಸತ, ತ್ಯಾಗ, ಶೌರ್ಯ ಇವುಗಳಿಗೆ ನೀನೆ ಮೊತ್ತಮೊದಲಿಗನಾಗಿದೆಯ್ಯ.

೫. ನೀನಿದ್ದರೆ ರಾಜ್ಯವುಂಟು. ನೀನಿದ್ದರೆ ಪಟ್ಟವುಂಟು, ಬಿಳಿಛತ್ರವುಂಟು. ನೀನಿದ್ದರೆ ಪರಂಪರೆ ಉಂಟು. ನೀನಿಲ್ಲದೆ ಇವೆಲ್ಲ ಉಂಟೆ ಅಂಗಾಧಿಪತಿ ?

೬. ಕಣ್ಣೊಳಗೆ, ಎದೆಯೊಳಗೆ ನಿನ್ನ ರೂಪವಿರುವುದು. ನನ್ನ ಕಿವಿಯೊಳಗೆ ನಿನ್ನ ಮಾತಿರುವುದು. ಕರ್ಣನೆ, ನನಗೆ ನಿನಗೆ ಈ ವಿಯೋಗ ಹೇಗಾಯಿತಯ್ಯ !

೭. ನಿನ್ನನ್ನು ಕೊಂದ ಅರ್ಜುನನು, ನನ್ನ ತಮ್ಮನನ್ನು ಕೊಂದ ಭೀಮನು ಇರುವರು. ನಾನು ಇನ್ನೂ ಇರುವೆನು. ನಿನ್ನಯ ಪ್ರೀತಿಗೆ ನನ್ನ ಒಳ್ಳೆಯತನಕ್ಕೆ ಇದುಸಾಲದೆ ?

೮. ಮಕ್ಕಳ ನಾಶವನ್ನು ಪ್ರಿಯ ಮಿತ್ರರ, ತಮ್ಮಂದಿರ ನಾಶವನ್ನು ಎಲೆ ವಿಧಾತನೆ ನನಗೆ ಕಾಣಿಸಿದೆ. ಇನ್ನು ಏನನ್ನು ತೋರಿಸಲಿರುವಿ ನೀನು ಪಾಪಕರ್ಮಿಯಾದ ನಿರ್ಗುಣಿನಾದ ನನಗೆ.

೯. ಕರ್ಣನ ಜೀವನವನ್ನು ದುಃಶಾಸನನ ಜೀವನವನ್ನು ಪೂರ್ತಿ ಕಂಡರೂ ಇನ್ನೂ ನನ್ನ ಪ್ರಾಣವಿದು ತಟ್ಟನೆ ಹೋಗಲಿಲ್ಲ. ಕಳ್ಳೆದೆಯುಲ್ಲಿ ನಿನ್ನ ಬಿಟ್ಟರೆ ಇನ್ನಾರಾದಾರೂ ಇರುವರೆ ?

೧೦. ನನಗೆ ಮನಸ್ಸು ಇಂದು ಶೂನ್ಯವಾಗಿದೆ. ಮನೆಯೂ ಭಣಗುಟ್ಟುವುದು. ಬೀಡು ಶೂನ್ಯವಾಗಿದೆ. ಇಡೀ ಜಗತ್ತೆ ನಿರರ್ಥಕವಾಯಿತು. ದು:ಶಾಸನನು ಇಲ್ಲದೆ ಕರ್ಣನಿಲ್ಲದೆ ನಾನು ಹೇಗೆ ಇರಲಿ ?

**ಕಠಿಣ ಶಬ್ದಗಳ ಅರ್ಥ**

ದಿನಕರ—ಸೂರ್ಯ. ತನೂಜ—ಮಗ. ಬಾಷ್ಪ—ಕಣ್ಣೀರು. ಅನಲ—ಬೆಂಕಿ. ಮುಳಿ—ಸಿಟ್ಟಿಗೇಳು. ಕೆಳೆ—ಗೆಳೆಯ. ಬೆಸನ—ವ್ಯಸನ. ಅನೃತಂ—ಸುಳ್ಳು. ಇರ್ಕುಮೆ—ಇರುವುವೆ. ನನ್ನಿ—ಸತ್ಯ. ಚಾಗ—ತ್ಯಾಗ. ಅಣ್ಮು—ಶೌರ್ಯ. ಬೆಳ್ಗೊಡೆ—ರಾಜಾಧಿರಾಜರ ಛತ್ರಬಿಳಿದು ಇರುವುದು ಬಿಳಿಯ ಕೊಡೆ. ಎರ್ದೆ—ಎದೆ. ಕಿರೀಟಿ—ಅರ್ಜುನ. ಕೂರ್ಮೆ—ಪ್ರೀತಿ. ಸೌಧರ್ವಿಕೆ—ಒಳ್ಳೆಯತನ. ಸೂನು—ಮಗ. ಅನುಜ—ತಮ್ಮ. ಅಳುವಂ—ನಾಶ. ಇನ—ಸೂರ್ಯ. ಅಸು—ಪ್ರಾಣ. ಬರ್ದನು—ಹೆಚ್ಚಿನವನು. ಶೂನ್ಯ—ಏನಿಲ್ಲವೆಂಬ ಭಣಗುಟ್ಟುವಿಕೆ,

**ಪ್ರಶ್ನೆ—ಉತ್ತರ**

**ಪ್ರಶ್ನೆ:** ೧ ದುರ್ಯೋಧನನು ಸೂಚಿಸಿದ ಮುವ್ವರು ಆದರ್ಶ ಮಿತ್ರರು ಯಾರು?

**ಉತ್ತರ :** ದುರ್ಯೋಧನ, ದುಃಶಾಸನ, ಮತ್ತು ಕರ್ಣ ಇವರು ಮುವ್ವರು ಆದರ್ಶ ಮಿತ್ರರು.

**ಪ್ರಶ್ನೆ :** ೨ ಕರ್ಣನು ಜೀವಿಸಿದಾಗ ದುರ್ಯೋಧನನನ್ನು ಕಂಡೊಡನೆ ಹೇಗೆ ನಡೆದುಕೊಳ್ಳುತ್ತಿರಬಹುದು.

**ಉತ್ತರ:** ಕರ್ಣನು ಜೀವಿಸಿದಾಗ ದುರ್ಯೋಧನನು ಇದಿರು ಬಂದರೆ ಸಂತೋಷದಿಂದ ನೋಡಿ ಮಾತಾಡಿ ಭರದಿಂದ ಅಪ್ಪಿಕೊಂಡು ನಿನ್ನ ಮನದ ವ್ಯಸನವ ದೇನು ? ಜೀಯಾ, ದೇವ, ಹೇಳು ಎಂದು ಅಂತಃಕರುಣದಿಂದ ಆದರದಿಂದ ಮಾತನಾತ್ತಿದ್ದನು.

**ಪ್ರಶ್ನೆ :** ೩ ಕರ್ಣನ ಯಾವ ಸದ್ಗುಣಗಳನ್ನು ದುರ್ಯೋಧನನು ಇಲ್ಲಿ ಎತ್ತಿ ತೋರಿದ್ದಾನೆ ?

**ಉತ್ತರ:** ಸುಳ್ಳು ಲೋಭ ಭಯವೆಂಬುವು ಕರ್ಣನಿದ್ದಲ್ಲಿ ಇರಲಾರವು: ಮತ್ತು ಅವನಿದ್ದಲ್ಲಿ ಸತ್ಯ, ತ್ಯಾಗ, ಶೌರ್ಯ ಇವು ಮನೆಮಾಡಿಕೊಂಡಿರುವುವು. ಎಂದು ಹೀಗೆ ಕರ್ಣನ ಸದ್ಗುಣಗಳನ್ನು ಎತ್ತಿ ತೋರಿರುವನು.

**ಪ್ರಶ್ನೆ :** ೪ ಕರ್ಣ-ದುರ್ಯೋಧನರ ಜೀವನದಲ್ಲಿ ಆತ್ಮೀಯತೆಯು ಎಷ್ಟೊಂದು ನಿಕಟವಾಗಿದೆ ಎಂಬುದನ್ನು ತೋರಿಸುವ ಮಾತುಗಳು ಯಾವು ?

**ಉತ್ತರ :** ಕರ್ಣನಿದ್ದರೆ ದುರ್ಯೋಧನನ ರಾಜ್ಯ, ಅವನ ಪಟ್ಟ, ಅವನ ಬಿಳಿ ಕೊಡೆಯ ವೈಭವ, ರಾಜಪರಂಪರೆ. ಕರ್ಣನಿಲ್ಲದಿರೆ ಇವಾವೂ ಇಲ್ಲವೆಂದು ಹೇಳಿದ ಮಾತುಗಳು ಅವರ ನಿಕಟಸಂಬಂಧ ತೋರುವುವು.

**ಪ್ರಶ್ನೆ :** ೫ ದುರ್ಯೋಧನನ ದು:ಖಾತಿರೇಕವು ಯಾವ ಮಾತುಗಳಲ್ಲಿ ಕಂಡು ಬರುವುದು ?

**ಉತ್ತರ :** ಮಕ್ಕಳು ಸತ್ತರು, ಮಿತ್ರರು ಸತ್ತರು, ತಮ್ಮಂದಿರು ಸತ್ತರು, ಇದನ್ನೆಲ್ಲ ನೋಡುವ ಪ್ರಸಂಗ ಬಂತು. ಅಯ್ಯೋ ಇನ್ನೂ ಏನೇನು ನೋಡುವುದಿದೆ. ದು:ಶಾಸನ ಮತ್ತು ಕರ್ಣನ ಸಾವನ್ನು ನೋಡಿ ತಾನು ಇನ್ನು ಬದುಕಿರುವನಲ್ಲ. ತನ್ನಂತಹ ಕಲ್ಲೆದೆಯವರು ಬೇರೆ ಯಾರಾದರೂ ಇರುವರೆ, ಎಂಬ ಮಾತುಗಳಲ್ಲಿ ಅವನ ದು:ಖಾತಿರೇಕವು ಕಾಣುವುದು.

**ಅಭ್ಯಾಸ :** ನೀವೇ ಮಾಡಿರಿ.

## ೧೪ ಕೋಗಿಲೆ

**ಈ ಕವಿತೆಯ ವಿಷಯವು ಯಾವುದು ?**

ಕೋಗಿಲೆ ಯಾವ ಬವಣೆಯನ್ನು ನೀಗಿರುವುದು ? ಕವಿಗೆ ಕೋಗಿಲೆ ಯಾವ ಉಪಕಾರ ಮಾಡಿದೆ. ಕೋಗಿಲೆಯ ಇಂಚರವು ಹೇಗಿರುವುದು?

**ಈ ಪಾಠದ ಸಾರಾಂಶ**

೧. ಕೂಗು ಕೋಗಿಲೆ, ನೀನು ಬವಣೆಯನು ನೀಗಿರುವೆ. ಸಾಗರವನ್ನು ದಾಟಿದ ಮೇಲೆ ತೆರೆಯ ಭಯವೇಕೆ? ಮಾಘ ಫಾಲ್ಗುಣ ಮಾಸಗಳು ಹೋಗಿವೆ ವಸಂತ ಮಾಸ ಬಂದಿಹುದು. ಅದಕ್ಕಾಗಿ ಕೋಗಿಲೆಯೆ ಕೂಗು.

೨. ತಿಳಿ ಕೊಳದ ತಿಳಿ ನೀರು ಜುಳು ಜುಳನೆ ಹರಿಯುವುದು. ಮಾವಿನ ಮರವು ಹೂ-ಚಿಗುರು ಬಿಟ್ಟು ಶೋಭಿಸುವುದು. ಮಲ್ಲಿಗೆಯ ಬಳ್ಳಿಯಲ್ಲಿ ಸುಳಿವ ತಂಗಾಳಿ ಹೂವಿನ ವಾಸನೆಯನ್ನು ಹಬ್ಬಿಸುವುದು.

೩. ಹೀಗೆ ಶೋಭಿಸುತ್ತಿರುವ ಸ್ಥಳಗಳಲ್ಲಿ ಸಂತೋಷದಿಂದ ನೀನು ಬಂದು ಶಾಂತಿಯನ್ನು ಕೊಡುವ ಮಾಮರದಲ್ಲಿ ಕುಳಿತು ಚಿಂತೆಯಲ್ಲಿ ಮುಳುಗಿರುವ ಭ್ರಾಂತ ಮನಸ್ಸನ್ನು ಸಂತೋಷ ಗೊಳಿಸುತ್ತ ಹಾಡು ಕೋಗಿಲೆಯೆ.

೪. ವೀಣೆಯ ಹಾಗೆ ದನಿ ತೆಗೆದು ಜಾಣ ಕೋಗಿಲೆಯೆ ಕೂಗು. ಇಂಪಾದ ಗಾನದಿಂದ ಸುಧೆಯನ್ನು ಹೊನಲಾಗಿ ಹರಿಸು ಜಾಣ ಕವಿಗಳು ನಿನ್ನ ಗಾನಕ್ಕೆ ಮರುಳಾಗಿ ನಲಿಯುವರು. ಅದಕ್ಕಾಗಿ ಕೋಗಿಲೆಯೆ ಕೂಗು.

**ಕಠಿಣ ಶಬ್ದಗಳ ಅರ್ಥ**

ಬವಣೆ—ದು:ಖ. ಮಧುಮಾಸ—ಚೈತ್ರಮಾಸ. ತಳಿತ—ಚಿಗುರಿದ. ತಾಣ—ಸ್ಥಳ. ಸುಧೆ—ಅಮೃತ. ಮಾಣದೆ—ಬಿಡದೆ.

**ಪ್ರಶ್ನೆ—ಉತ್ತರ**

**ಪ್ರಶ್ನೆ :** ೧ ಕೋಗಿಲೆಯು ಯಾವ ಬವಣೆಯನ್ನು ನೀಗಿರುವುದು ?

**ಉತ್ತರ :** ಕೋಗಿಲೆ ಕಾಗೆಯಿಂದ ಪೋಷಿತವಾದುದು. ಮಧುಮಾಸ ಬರುವ ತನಕ ಅದಕ್ಕೆ ಹೊರಬರುವ ಧೈರ್ಯವಿರದು. ಈಗ ಮಧುಮಾಸ ಬಂದಿದೆ. ಇನ್ನು ಯಾರ ಪೋಷಣೆಯ ಆಶ್ರಯ ಕಾರಣವಿಲ್ಲ. ಚಳಿಗಾಲವೆಂಬ ಬವಣೆಯನ್ನು ಆಸರವೆಂಬ ಬವಣೆಯನ್ನು ಅದು ನೀಗಿದೆ.

**ಪ್ರಶ್ನೆ :** ೨ ವಸಂತ ಕಾಲದ ಯಾವ ಲಕ್ಷಣವನ್ನು ಕವಿಯು ಇಲ್ಲಿ ಹೇಳಿರುವನು ?

**ಉತ್ತರ :** ಮಾಮರವು ತಳಿತಿದೆ, ಮಲ್ಲಿಗೆ ಅರಳಿದೆ, ಮಾಘ ಫಾಲ್ಗುಣಗಳು ಸಂದಿಹೋಗಿವೆ, ಎಂದು ವಸಂತಕಾಲದ ಲಕ್ಷಣಗಳನ್ನು ಕವಿಯು ಇಲ್ಲಿ ಹೇಳಿದ್ದಾನೆ.

**ಪ್ರಶ್ನೆ :** ೩ ಕವಿಗೆ ಕೋಗಿಲೆಯು ಮಾಡುವ ಉಪಕಾರವಾವುದು ?

**ಉತ್ತರ :** ಕವಿ ಚಿಂತೆಯಲ್ಲಿ ಮುಳುಗಿ ಮನವು ಭ್ರಾಂತಿಗೊಂಡಿರುವಾಗ ಕೋಗಿಲೆಯು ಹಾಡಿ ಅವನನ್ನು ಸಂತೋಷಗೊಳಿಸುವುದು. ಇದೇ ಅದು ಮಾಡಿದ ಉಪಕಾರ.

**ಪ್ರಶ್ನೆ :** ೪ ಕೋಗಿಲೆಯ ಇಂಚರವನ್ನು ಕವಿಯು ಇಲ್ಲಿ ಯಾವ ವಸ್ತುವಿಗೆ ಹೋಲಿಸಿದ್ದಾನೆ ?

**ಉತ್ತರ** ವೀಣೆಯ ದನಿಗೆ, ಅಮೃತಕ್ಕೆ ಕವಿಯು ಕೋಗಿಲೆಯ ಇಂಚರವನ್ನು ಹೋಲಿಸಿದ್ದಾನೆ.

**ಅಭ್ಯಾಸ :** ೨ ಹೊಳೆಯ ದಾಟಿದ ಮೇಲೆ ಅಂಬಿಗನ ಭಯವೇಕೆ ?



# ೧೫ ಸರ್ವಜ್ಞನ ವಚನಗಳು

**ಈ ಕವಿತೆಯ ವಿಷಯವು ಯಾವುದು ?**

ಸರ್ವಜ್ಞನಾಗಬೇಕಾದರೆ ಏನು ಮಾಡಬೇಕು ? ದೇವತ್ವವು ಯಾತರಲ್ಲಿದೆ ? ಯಾರಿಗೆ ಸತ್ಪುರುಷರು ಎನ್ನಬೇಕು ? ವಿದ್ಯೆಯ ಮಹಿಮೆ ಎಂತಹದು ? ಮುಂತಾಗಿ ಇಲ್ಲಿ ಹೇಳಿದೆ.

**ಈ ಪಾಠದ ಸಾರಾಂಶ**

೧ ಸರ್ವಜ್ಞನೆಂಬುವನು ಗರ್ವದಿಂದ ಆಗುವನೆ ? ಇಲ್ಲ. ಒಬ್ಬೊಬ್ಬರಲ್ಲಿ ಒಂದೊಂದು ಮಾತು ಕಲಿತು ವಿದ್ಯೆಯ ಪರ್ವತವಾದರೆ ಅವನು ಸರ್ವಜ್ಞನಾಗುವನು.

೨. ನಾಲಗೆಗೆ ಎಲುಬು ಇಲ್ಲ. ಬಡವನಿಗೆ ಬಲವಿಲ್ಲ. ಆಕಾಶಕ್ಕೆ ತೊಲೆ ಕಂಭಗಳು ಇಲ್ಲ. ದೇವರು ಕುಲಭೇದ ಮಾಡುವುದಿಲ್ಲ.

೩. ಆ ದೇವರು ಈ ದೇವರು ಮಹಾದೇವರು ಎಂದು ಅನ್ನಬೇಡ. ಈ ಭೂಮಿಯ ಮೇಲಿನ ಪ್ರಾಣಿಗಳಿಗೆ ಆಧಾರವಾದವನೇ ದೇವ.

೪. ನವಿಲಿನಲ್ಲಿ ಚಿತ್ರವನ್ನು ಗಗನದಲ್ಲಿ ವಿಚಿತ್ರವನ್ನು ಎಲೆ-ಹೂ ಇವುಗಳ ಬೇರೆ ಬೇರೆ ಬಣ್ಣವನ್ನು ಯಾರು ಚಿತ್ರಿಸಿದರು ?

೫. ಕಲ್ಲುಒಟ್ಟಿ, ಕಲ್ಲಮನೆಕಟ್ಟಿ, ಕಲ್ಲಮೇಲೆ ಕಲ್ಲ ಕೇಳುವ ಮಾನವರು ಕಲ್ಲಿನಂತಹರು.

೬. ಸಿರಿವಂತಿಕೆ ಬಂದ ಕಾಲಕ್ಕೆ ಕರೆದು ದಾನಮಾಡು. ಹಾಗೆ ಮಾಡಿದ ಪರಿಣಾಮವು ಕೈಲಾಸವು ನೆರೆಮನೆಯಂತೆ ಮಾಡುವುದು.

೭. ತನ್ನ ದೋಷವನ್ನು ಊರಬೆನ್ನಹಿಂದೆ ಇಟ್ಟು ತಾನು ಅನ್ಯರು ಮಾಡಿದ ಕೆಲಸಕ್ಕೆ ಹುಲಿಯ ಹಾಗೆ ಶ್ರೇಯಸ್ಸಿಗೆ ಕೈಯೊಡ್ಡುವ ಮಾನವನು ಕುನ್ನಿಯಹಾಗೆ.

೮. ಗಾನವಿದ್ಯೆಯು ಒಳ್ಳೆಯದು. ಮಾನವಂತಳಾದ ಹೆಂಡತಿ ಚೆನ್ನು. ಸ್ವತ: ಪ್ರಯೋಗಮಾಡಿ ಅನುಭವ ಪಡೆದವರ ಗೆಳೆತನ ಒಳ್ಳೆಯದು. ಎಲ್ಲದರಲ್ಲಿ ದಾನಿ ಒಳ್ಳೆಯವನು.

೯. ಚಂದನವನ್ನು ಕರಗಿಸಲು ಬೇಯಿಸಬೇಕು. ಆಗ ಪರಿಮಳ ಹೊರಡುವುದು. ಹಿಂದಾದುದನ್ನು ಅರಿಯುವಂತಹರು ಸತ್ಪುರುಷರು. ಅವರು ನೊಂದು ಸಹಿಸಿಕೊಳ್ಳುವರು.

೧೦. ಒಕ್ಕಲು ಇಲ್ಲದ ಊರು, ಮಕ್ಕಳಿಲ್ಲದ ಮನೆಯು, ಲೆಕ್ಕ ಇಡದವನ ವ್ಯಾಪಾರ ಇವು ಮೂರು ಬಲು ದು:ಖತರುವ ಸಂಗತಿಗಳು,

೧೧. ಬೆಕ್ಕು ಮನೆಯಲ್ಲಿದ್ದರೆ ಒಳ್ಳೆಯದು. ಬೀಸುಕಲ್ಲಿಗೆ ಮುಕ್ಕು ಹಾಕುವುದು ಒಳ್ಳೆಯದು. ನಕ್ಕು ನಗಿಸುವ ನುಡಿ ಒಳ್ಳೆಯದು. ಊರಿಗೆ ಒಕ್ಕಲಿಗನಿದ್ದರೆ ಒಳ್ಳೆಯದು.

೧೨. ವಿದ್ಯೆಯಿದ್ಧವನ ಮುಖವು ಮೋಹಕವಾಗಿರುವುದು. ವಿದ್ಯೆಯಿಲ್ಲದವನ ಮುಖವು ಹಾಳೂರ ಹದ್ದಿನಹಾಗೆ ತಿರಸ್ಕರಣೀಯವಾದುದು.

**ಕಠಿಣ ಶಬ್ದಗಳ ಅರ್ಥ**

ಧರ್ಮ—ಧಾನ. ಚಂದನ—ಗಂಧ ಬೇಹಾರ—ವ್ಯವಹಾರ.

**ಪ್ರಶ್ನೆ—ಉತ್ತರ**

**ಪ್ರಶ್ನೆ ೧** ಸರ್ವಜ್ಞನು ಹೇಗೆ ಆಗುವನು ?

**ಉತ್ತರ:** ತಾನೇ ಎಲ್ಲವನ್ನು ಬಲ್ಲವನು ಎಂದು ಹೇಳಿಕೊಳ್ಳುವುದರಿಂದ ಸರ್ವಜ್ಞನಾಗುವುದಿಲ್ಲ. ಒಬ್ಬೊಬ್ಬರಿಂದ ಒಂದೊಂದು ಮಾತು ಕಲಿತು ತಾನು ವಿದ್ಯೆಯ ಪರ್ವತವಾದರೆ ಸರ್ವಜ್ಞನಾಗುವನು.

**ಪ್ರಶ್ನೆ : ೨** ನಿಜವಾದ ದೇವತ್ವ ಏತರಲ್ಲಿದೆ ?

ಉತ್ತರ :ದೇವತ್ವವು ಹೆಸರಿನಲ್ಲಿ ಇಲ್ಲ. ಗುಣದಲ್ಲಿವೆ. ಸಕಲ ಪ್ರಾಣಿಗಳಿಗೆ ಆ ರನಾಗಿ ಸಂರಕ್ಷಿಸುವ ಗುಣ ಎಲ್ಲಿದೆ ಅದರಲ್ಲಿಯೇ ನಿಜವಾದ ದೇವತ್ವ.

**ಪ್ರಶ್ನೆ : ೩** ದೇವನ ಸೃಷ್ಟಿಕೌಶಲವನ್ನು ಕವಿಯು ಹೇಗೆ ಸೂಚಿಸಿರುವನು?

ಉತ್ತರ : ನವಿಲು ವಿವಿಧಬಣ್ಣಗಳಗರಿಗಳಿಂದ ಆಗಿರುವುದು. ಆಕಾಶ ಚಿಕ್ಕೆಗಳು ಇರುವುವು. ಎಲೆ–ಹೂ ಇವುಗಳ ಬಣ್ಣ ವಿವಿಧವಾಗಿರುವುದು. ಇದನ್ನೆ ಮಾಡಿದ ದೇವನು ಕುಶಲನು ಎಂದು ಕವಿಯು ಸೂಚಿಸಿರುವನು.

**ಪ್ರಶ್ನೆ: ೪** ಸತ್ಪುರುಷರ ಲಕ್ಷಣಗಳೇನು ?

ಉತ್ತರ : ಸತ್ಪುರುಷರು ಗಂಧದ ಗಿಡವಿದ್ದಂತೆ. ಬೆಂದು ತೇಯಿದಾಗ ಅದ ಪರಿಮಳ. ಅದರಂತೆ ತಪಸ್ಸುಮಾಡಿ, ನೋವನ್ನು ಸಹಿಸಿದವರು ಸತ್ಪುರುಷರು.

**ಪ್ರಶ್ನೆ : ೫** ವಿದ್ಯೆಯ ಮಹಿಮೆಯನ್ನು ಸರ್ವಜ್ಞನು ಹೇಗೆ ಹೊಗಳಿರುವನು?

ಉತ್ತರ : ಕಲಿತವರು ಮುಖವು ಆಕರ್ಷಕವಾಗಿರುವುದು. ವಿದ್ಯೆಯಿಲ್ಲದವನ ಮುಖವು ಹಾಳೂರ ಹದ್ದಿನಂತೆ ಇರುವುದು, ಎಂದು ಹೇಳಿ ಸರ್ವಜ್ಞನು ವಿದ್ಯೆಯನ್ನು ಹೊಗಳಿರುವನು.

**ಪ್ರಶ್ನೆ : ೬** ಸರ್ವಜ್ಞನ ಅಭಿಪ್ರಾಯದಲ್ಲಿ ಯಾವ ಯಾವ ಸಂಗತಿಗಳು ಲೇಸು.

**ಉತ್ತರ :** ಗಾನವಿದ್ಯೆಯು ಲೇಸು, ಮಾನವತಿ ಸತಿ ಲೇಸು, ಸ್ವಾನುಭಾವಿಗಳ ಕೆಳೆಲೇಸು, ದಾನಿಯು ಲೇಸು. ಮನೆಯೊಳಗೆ ಬೆಕ್ಕು ಲೇಸು, ಬೀಸುವ ಕಲ್ಲಿಗೆ ಮುಕ್ಕು ಲೇಸು, ನಕ್ಕುನಗಿಸುವ ನುಡಿ ಲೇಸು, ಊರಿಗೆ ಒಕ್ಕಲಿಗ ಲೇಸು, ಈ ಸಂಗತಿಗಳು ಸರ್ವಜ್ಞನ ಅಭಿಪ್ರಾಯಿರಲ್ಲಿ ಲೇಸು.

**ಅಭ್ಯಾಸ :** ಹೊತ್ತಿಗೆ ಆದವನೆ ಗೆಳೆಯ; ಆಪತ್ತಿದಲ್ಲಿ ನೆರವಾದವನೆ ನೆಂಟ.



**ಮುಗಿದುದು**

ಇವರು ಬರೆದವು.

ಗೌರೀಶವಾಚನದ ೫,೬ನೇ ಅರ್ಥವು ತಯಾರಾಗಿ

೭ನೆಯ ಅರ್ಥದ ಮುದ್ರಣ ಮುಗಿಯುತ್ತಲಿದೆ

ಹಾಗೂ

ಅಭಿನವ ವಾಚನಮಾಲೆಯ ೫, ೭ ನೆಯ

ವರ್ಗಗಳಿಗಾಗಿ ಅರ್ಥಗಳು

**ಮಾರಾಟಕ್ಕೆ ಸಿದ್ಧವಾಗಿರುತ್ತವೆ**

**ಬೇಗನೆ ಆರ್ಡರ ಕೊಟ್ಟು ತರಿಸಿಕೊಳ್ಳಬೇಕಾಗಿ ವಿನಂತಿ**

ದೊರೆಯುವ ಸ್ಥಳ :

**ಶ್ರೀಸಾಯಿ ಪಬ್ಲಿಶಿಂಗ ಹೌಸ ವಿಜಯ ರೋಡ ಧಾರವಾಡ**

ಮುದ್ರಕರು :

**ಎಸ್. ವಾಯ್. ಪವಾರ**

ದಿ ಧಾರವಾಡ ಪ್ರಿಂಟಿಂಗ ಪ್ರೆಸ್ ಧಾರವಾಡ